ಪಿ. ವಿ. ಕೃಷ್ಣಮೂರ್ತಿ

# ಬೆಂಗಳೂರು ಜಿಲ್ಲೆಯ ಪ್ರಾಚೀನ ಪ್ರಾದೇಶಿಕ ವಿಭಾಗಗಳು

(ಕ್ರಿ. ಶ. ಸು. ೫೦೦ ರಿಂದ ಕ್ರಿ.ಶ. ಸು. ೧೩೫೦ರ ವರೆಗೆ)

---

ಆಡಳಿತದ ಅನುಕೂಲಕ್ಕಾಗಿ ಒಂದು ಜಿಲ್ಲೆಯನ್ನು ತಾಲ್ಲೂಕು, ಹೋಬಳಿ, ಪಂಚಾಯ್ತಿ ಮತ್ತು ಗ್ರಾಮ ಎಂದು ವಿಂಗಡಿಸಿಕೊಂಡಿರುವುದು ಪ್ರಚಲಿತ ವ್ಯವಸ್ಥೆ. ಇಂತಹುದೇ ಕ್ರಮವು ಪ್ರಾಚೀನಕಾಲದಲ್ಲೂ ಪ್ರಚಲಿತ ವಿತ್ತೆ? ಇದ್ದರೆ, ಅದರ ಸ್ವರೂಪವೇನು? ಅಂದು ಪ್ರಸಿದ್ಧವಾಗಿದ್ದ ಪ್ರಾದೇಶಿಕ ವಿಭಾಗಗಳಾವುವು? ಅವು ಗಳಲ್ಲಿ ಸಮಾವೇಶಗೊಂಡಿದ್ದ ಗ್ರಾಮಗಳೆಷ್ಟು? ಅವು ಯಾವುವು? ಎಂಬಿವೇ ಮುಂತಾದ 'ಐತಿಹಾಸಿಕ ಭೂಗೋಳ'ಕ್ಕೆ ಸಂಬಂಧಿಸಿದ ಅಂಶಗಳನ್ನು ಅರಸುತ್ತಾ ಹೋದರೆ ಹಲವಾರು ಪ್ರಾದೇಶಿಕ ವಿಭಾಗಗಳು ನಮ್ಮ ಗಮನ ಸೆಳೆಯುತ್ತವೆ. ಈ ನಿಟ್ಟಿನಲ್ಲಿ ಶೋಧಿಸಲು ನಮಗಿರುವ ಮೂಲ ಆಕರಗಳೆಂದರೆ ಶಾಸನಗಳು. ಪ್ರಸ್ತುತ, ಬೆಂಗಳೂರು ಜಿಲ್ಲೆಯ ಶಾಸನಗಳನ್ನು ಅವ ಲೋಕಿಸಿ, ಸುಮಾರು ಕ್ರಿ.ಶ. ೫೦೦ ರಿಂದ ಕ್ರಿ.ಶ. ೧೩೫೦ರ ಅವಧಿಯಲ್ಲಿ ಪ್ರಚಲಿತವಿದ್ದ ಪ್ರಾದೇಶಿಕ ವಿಭಾಗಗಳು, ಉಪವಿಭಾಗಗಳು, ಇತ್ಯಾದಿಗಳನ್ನು ಗುರು ತಿಸುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ.

ಈ ಜಿಲ್ಲೆಯಲ್ಲಿ ಸಿಕ್ಕುವ ಪ್ರಾರಂಭಕಾಲದ ಶಾಸನ ಗಳೆಂದರೆ ಗಂಗರವು. ನಂತರದಲ್ಲಿ ಚೋಳ ಮತ್ತು ಹೊಯ್ಸಳರ ಶಾಸನಗಳು ದೊರೆಯುತ್ತವೆ. ಸುಮಾರು ಕ್ರಿ.ಶ. ೧೩೪೦ರ ನಂತರ ವಿಜಯನಗರದ ಅರಸರ ಶಾಸನ ಗಳು ಕಾಣಿಸಿಕೊಳ್ಳುತ್ತವೆ.

ಈ ಪ್ರದೇಶದ ಪ್ರಾದೇಶಿಕ ವಿಭಾಗಗಳನ್ನು ಚೋಳರು ಪ್ರವೇಶಗೊಳ್ಳುವ ಮೊದಲು ಇದ್ದ ಪ್ರಾದೇಶಿಕ ವಿಭಾಗಗಳು ಮತ್ತು ಚೋಳ ಮತ್ತು ಹೊಯ್ಸಳರ ಕಾಲದ ಪ್ರಾದೇಶಿಕ ವಿಭಾಗಗಳು ಎಂಬ ಎರಡು ಮುಖ್ಯವಾದ ಹಂತಗಳಲ್ಲಿ ಗುರುತಿಸಬಹುದಾಗಿದೆ.

ಗಂಗರ ಕಾಲದಲ್ಲಿ ಇಡೀ ಜಿಲ್ಲೆ 'ಗಂಗವಾಡಿ ತೊಂಬತ್ತಾರು ಸಾವಿರ' ಎಂಬ ಪ್ರದೇಶದಲ್ಲಿ ಅಂತರ್ಗತ ವಾಗಿದ್ದಿತು. ಈ ಜಿಲ್ಲೆಯ ಕ್ರಿ.ಶ. ೮೯೦ರ ಬೇಗೂರು ಶಾಸನ ಮತ್ತು ಕ್ರಿ.ಶ. ೧೧೦೫ರ ಶಾಸನವೊಂದರಲ್ಲಿ ಗಂಗವಾಡಿ ೯೬,೦೦೦ದ ಉಲ್ಲೇಖವಿದೆ.[1] ಕೋಲಾರ, ಮೈಸೂರು, ತುಮಕೂರು ಮುಂತಾದ ಜಿಲ್ಲೆಗಳ ಶಾಸನ ಗಳಲ್ಲೂ ಈ ನಾಡಿನ ಉಲ್ಲೇಖ ಕಂಡುಬರುತ್ತದೆ. 'ಗಂಗವಾಡಿ', 'ಗಂಗಪಾಡಿ', 'ಗಂಗವಾಡಿ ಛಾನ್ನವತಿ ಸಹಸ್ರ' ಎಂದು ಮುಂತಾಗಿ ಈ ಪ್ರದೇಶವನ್ನು ಶಾಸನಗಳು ಕರೆದಿವೆ. ಇದು ಸಮಗ್ರ ಗಂಗ ಸಾಮ್ರಾಜ್ಯದ ಪ್ರತಿನಾಮ. ಬೆಂಗಳೂರು ಜಿಲ್ಲೆಗೆ ಸಂಬಂಧಿಸಿದಂತೆ ಈ ಪ್ರದೇಶದಲ್ಲಿ ಅಂತರ್ಗತವಾಗಿದ್ದ ನಾಡುಗಳಲ್ಲಿ, 'ಗಂಗ ಆಱುಸಾಸಿರ'

---

1. ಎಪಿಗ್ರಾಫಿಯ ಕರ್ನಾಟಿಕ, ಸಂ. ೯, ಬೆಂಗಳೂರು ೮೩, ೧೪೨, ಇತ್ಯಾದಿ

(ಗಂಗ ೬೦೦೦) ಎಂಬ ಒಂದು ದೊಡ್ಡ ಪ್ರಾದೇಶಿಕ ವಿಭಾಗ ಮತ್ತು 'ಕರಿಕನಾಡು', 'ಪೊರಸುನಾಡು', 'ಬೆಂಪೂರು ಪನ್ನೆರಡು', 'ಕುಂದನಾಡ ಎಪ್ಪತ್ತು', 'ಕೈವಾರನಾಡು', 'ನೆಕ್ಕುಂದಿನಾಡು', 'ಕೆಟ್ತಿಕುನ್ದ ಮೂನೂರು', 'ಪುನ್ನಾಡು', 'ಸಟಿ³ನ್ನ ಮೂನೂರು', 'ಕುಣುಂಗಿ ಅಯ್ನೂರು', ಮುಂತಾದುವು ಮುಖ್ಯವಾದವು. ಇವುಗಳಲ್ಲಿ ಕೆಲವು ಅಂಕಿಗಳನ್ನು ಒಳಗೊಂಡಿರುವುದು ಗಮನಾರ್ಹ ; ಏಕೆಂದರೆ ಈ ತೆರನಾದ ಅಂಕಿಗಳನ್ನು ಬಳಸುವುದು ಕರ್ನಾಟಕದ ಅಂಪರೆ ಕನ್ನಡ ಅರಸು ಮನೆತನಗಳ ಒಂದು ಪ್ರಧಾನ ಅಂಶವೆನ್ನಬಹುದು. ಉತ್ತರಕರ್ನಾಟಕ ಭಾಗದ ಶಾಸನಗಳನ್ನು ಗಮನಿಸಿದಾಗ ಕಂಡುಬರುವಷ್ಟು ಸಂಖ್ಯೆಗಳನ್ನೊಳಗೊಂಡ ಪ್ರಾದೇಶಿಕ ವಿಭಾಗಗಳು ಈ ಪ್ರದೇಶದಲ್ಲಿ ಇಲ್ಲವೆನ್ನಬಹುದು.

ಕ್ರಿ.ಶ. ಹನ್ನೊಂದನೆಯ ಶತಮಾನದ ಪ್ರಾರಂಭದಲ್ಲಿ ಈ ಪ್ರದೇಶವು ಚೋಳರ ವಶವಾಯಿತು. ಅವರ ಪ್ರವೇಶದೊಂದಿಗೆ 'ಮಂಡಲ', 'ವಳನಾಡು', 'ನಾಡು', ಮತ್ತು 'ಗ್ರಾಮ' ಎಂಬ ಕ್ರಮವಾದ ಆಡಳಿತ-ವಿಭಾಗಗಳು ಕಾಣಿಸಿಕೊಳ್ಳತೊಡಗಿದವು. ಅವುಗಳಲ್ಲಿ ಮೊದಲಿಗೆ ಮುಡಿಗೊಂಡ ಚೋಳಮಂಡಲ (ಕ್ರಿ.ಶ.ಸು. ೧೦೦೦),[2] ವಿಕ್ರಮ ಚೋಳಮಂಡಲ (ಕ್ರಿ.ಶ.ಸು. ೧೦೪೬),[3] ಕರಿಕಾಲ ಚೋಳ ವಳನಾಡು (ಕ್ರಿ.ಶ.ಸು. ೧೦೦೦),[4] ಕ್ಷತ್ರಿಯ ಶಿಖಾಮಣಿ ವಳನಾಡು (ಕ್ರಿ.ಶ. ೧೦೩೪),[5] ಮುಂತಾದುವು ಕಾಣಿಸಿಕೊಳ್ಳುತ್ತವೆ. ನಂತರದಲ್ಲಿ 'ನಿಗರಿಲಿ ಚೋಳಮಂಡಲ',[6] 'ರಾಜೇಂದ್ರ ಚೋಳ ವಳನಾಡು'[7] ಮೊದಲಾದ ನಾಡು ಒಳನಾಡುಗಳ ಉಲ್ಲೇಖಗಳು ಕಂಡುಬರುತ್ತವೆ. ಇವರ ಪ್ರಾರಂಭದ ಶಾಸನಗಳು ಕನ್ನಡದಲ್ಲೂ ನಂತರದವು ತಮಿಳಿನಲ್ಲೂ ಇವೆ.

ಮುಡಿಗೊಂಡ ಚೋಳಮಂಡಲದಲ್ಲಿ ರಾಜೇಂದ್ರ ಚೋಳ ವಳನಾಡು, ಕರಿಕಾಲ ಚೋಳ ವಳನಾಡುಗಳು ಅಂತರ್ಗತವಾಗಿದ್ದವು. ವಿಕ್ರಮ ಚೋಳಮಂಡಲದಲ್ಲಿ ಸಣ್ಣೆನಾಡು, ಕುಕ್ಕನೂರುನಾಡು, ಮಣ್ಣೆನಾಡು, ಮುಂತಾದುವು ಸಮಾವೇಶಗೊಂಡಿದ್ದವು. ನಿಗರಿಲಿ ಚೋಳಮಂಡಲವು ಮಣ್ಣೆನಾಡು, ರಾಜೇಂದ್ರ ಚೋಳ ವಳನಾಡು, ಪುಲ್ಲಿಯೂರುನಾಡು, ಇಲೈಪಾಕ್ಕನಾಡು (ಯಲಹಂಕನಾಡು), ವೆಪ್ಪೂರುನಾಡು (ಬೇಗೂರು ನಾಡು)ಗಳನ್ನು ಒಳಗೊಂಡಿದ್ದಿತು.

ಕ್ರಿ.ಶ. ಸುಮಾರು ೧೧೧೦ರ ನಂತರ ಕ್ರಮ ಕ್ರಮವಾಗಿ ಈ ಪ್ರದೇಶ ಹೊಯ್ಸಳರ ವಶವಾಯಿತು. ಮಂಡಲ, ವಳನಾಡು, ನಾಡು ಎಂಬ ವಿಭಾಗಕ್ರಮದಲ್ಲಿ ಗಮನಾರ್ಹ ಬದಲಾವಣೆಗಳೇನೂ ಆಗಲಿಲ್ಲ. ಅಷ್ಟೇ ಅಲ್ಲದೆ, ಅಪ್ಪಟ ಕನ್ನಡ ಅರಸು ಮನೆತನದವರಾದ ಇವರು, ತಮ್ಮ ಅನೇಕ ಶಾಸನಗಳನ್ನು ಈ ಪ್ರದೇಶದಲ್ಲಿ ತಮಿಳು ಭಾಷೆಯಲ್ಲಿ ಹಾಕಿಸಿರುವುದು ವಿಶಿಷ್ಟವಾದ ಅಂಶವಾಗಿದೆ.

ಚೋಳರ ಕಾಲದಲ್ಲಿ ಅನೇಕ ಗ್ರಾಮಗಳನ್ನು ಚತುರ್ವೇದಿ ಮಂಗಲಗಳನ್ನಾಗಿ ಅಂದರೆ ಅಗ್ರಹಾರಗಳನ್ನಾಗಿ ಬ್ರಾಹ್ಮಣರಿಗೆ ದಾನವಾಗಿ ನೀಡಿರುವ ಉಲ್ಲೇಖಗಳು ವಿಪುಲವಾಗಿವೆ. ಇದೇ ಪದ್ಧತಿ ಹೊಯ್ಸಳರ ಕಾಲದಲ್ಲೂ ಮುಂದುವರೆದಿರುವುದು ಕಂಡುಬರುತ್ತದೆ. ಇಂತಹ ಸಂದರ್ಭದಲ್ಲಿ ದಾನವಾಗಿ ಕೊಡುವ ಗ್ರಾಮಕ್ಕೆ ಪ್ರತಿನಾಮಧೇಯವೊಂದನ್ನು ನೀಡಿರುವುದುಂಟು. ಉದಾ : ಮಳೂರು > ರಾಜೇನ್ದ್ರಸಿಂಹ

---

2. ಎ. ಕ., ೯, ಚನ್ನಪಟ್ಟಣ ೯೨
3. ಅದೇ, ದೇವನಹಳ್ಳಿ ೭೫
4. ಅದೇ, ಚನ್ನಪಟ್ಟಣ ೯೨
5. ಅದೇ, ಚನ್ನಪಟ್ಟಣ
6. ಅದೇ, ಹೊಸಕೋಟೆ ೪೦, ೭೫ ಇತ್ಯಾದಿ
7. ಅದೇ, ಬೆಂಗಳೂರು ೮೫

ಚತುರ್ವೇದಿ ಮಂಗಲ,[8] ಪುಂಗನೂರು>ತ್ರೈಲೋಕ್ಯ ದೇವಿ ಚತುರ್ವೇದಿ ಮಂಗಲ, ಇತ್ಯಾದಿ.[9]

ಗಂಗರ ಕಾಲದಲ್ಲಿ ಪ್ರಚಲಿತವಿದ್ದ ಅನೇಕ ನಾಡುಗಳು, ಚೋಳ ಮತ್ತು ಹೊಯ್ಸಳರ ಕಾಲದಲ್ಲೂ ಅದೇ ಹೆಸರಿನಲ್ಲಿ ಮುಂದುವರೆದಿರುವುದು ಕಂಡುಬರುತ್ತದೆ. ಉದಾಹರಣೆಗೆ, ಮೊರಸುನಾಡು, ಕೈವಾರನಾಡು, ಬೆಂಪೂರು>ವೆಪ್ಪೂರು, ಸಣ್ಣೆನಾಡು ಮುಂತಾದುವು.

ಬೆಂಗಳೂರು ಜಿಲ್ಲೆಯ ಪ್ರದೇಶದಲ್ಲಿ ಕ್ರಿ.ಶ.ಸು. ೫೦೦ ರಿಂದ ಕ್ರಿ.ಶ.ಸು. ೧೩೫೦ರ ಅವಧಿಯಲ್ಲಿ ಬೇರೆ ಬೇರೆ ಭಾಗಗಳಲ್ಲಿ ಹೆಸರುಗೊಂಡ ಸುಮಾರು ಮೂವತ್ತಕ್ಕಿಂತಲೂ ಹೆಚ್ಚಿನ ಪ್ರಾದೇಶಿಕ ಅಥವಾ ಆಡಳಿತ ವಿಭಾಗಗಳನ್ನು ಗುರುತಿಸಬಹುದಾಗಿದೆ. ಅವುಗಳ ಸ್ಥೂಲ ವಿವರ ಈ ಕೆಳಕಂಡಂತೆ ಇದೆ :

**ಗಂಗವಾಡಿ ತೊಂಬತ್ತಾರು ಸಾವಿರ**

ಇದು ಗಂಗರ ಆಳ್ವಿಕೆಯ ಪೂರ್ಣ ಪ್ರದೇಶವನ್ನು ಪ್ರತಿನಿಧಿಸುತ್ತದೆ. ಕ್ರಿ.ಶ.ಸು. ೮೯೦ರ ಬೇಗೂರು ಶಾಸನದಲ್ಲಿ 'ಗಂಗವಾಡಿ ತೊಂಬತ್ತಾರು ಸಾವಿರ'ದ ಉಲ್ಲೇಖ ಕಂಡುಬಂದರೆ, ಬೆಂಗಳೂರು ಮ್ಯೂಸಿಯಂನ ಕ್ರಿ.ಶ. ೧೧೦೫ರ ಶಾಸನದಲ್ಲಿ 'ಗಂಗವಾಡಿ' ಎಂಬ ಉಲ್ಲೇಖ ದೊರೆಯುತ್ತದೆ. ಚೋಳರ ಮತ್ತು ಹೊಯ್ಸಳರ ಕಾಲದ ಅನೇಕ ಶಾಸನಗಳಲ್ಲಿ 'ಗಂಗಪಾಡಿ' ಎಂದು ಈ ಪ್ರದೇಶವನ್ನು ಕರೆದಿರುವುದು ಕಂಡುಬರುತ್ತದೆ.

**ಗಂಗ ಆಱುಸಾಸಿರ (ಗಂಗ ೬೦೦೦)**

ಬೆಂಗಳೂರು ದಕ್ಷಿಣ ತಾಲ್ಲೂಕಿನ ವರ್ತೂರು ಗ್ರಾಮದ ಶಾಸನ (ಕ್ರಿ.ಶ.ಸು. ೮೨೦)[10] ಮತ್ತು ಹೊಸಕೋಟೆ ತಾಲ್ಲೂಕಿನ ಜೋಡಿದಳಸಗೆರೆ ಗ್ರಾಮದ ಶಾಸನಗಳಲ್ಲಿ (ಕ್ರಿ.ಶ.ಸು. ೮೬೦) ಉಲ್ಲೇಖಗೊಂಡಿದೆ.[11] ಬೆಂಗಳೂರು ಜಿಲ್ಲೆಯ ಪೂರ್ವಕ್ಕಿರುವ ಕೋಲಾರ ಮತ್ತು ಧರ್ಮಪುರಿ ಜಿಲ್ಲೆಯ ಅನೇಕ ಪ್ರಾಚೀನ ಶಾಸನಗಳಲ್ಲಿ 'ಗಂಗ ೬೦೦೦' ಪ್ರದೇಶದ ಉಲ್ಲೇಖಗಳು ಕಂಡುಬರುತ್ತದೆ. ಬೆಂಗಳೂರು ಜಿಲ್ಲೆಯ ಶಾಸನಗಳಲ್ಲಿ ಉಕ್ತವಾಗಿರುವ ಈ ಪ್ರದೇಶಕ್ಕೆ ಸಂಬಂಧಿಸಿದ ಗ್ರಾಮಗಳೆಂದರೆ—ಎರೆಯಪ ಮಂಗಲ, ಮೆರೂರು ಕುನ್ದಾಣಿ, ನೆಲ್ಲಿಗೆಟ್ಟಿ ಗ್ರಾಮಗಳು. ಮೊರಸುನಾಡು ಗಂಗ ಆರು ಸಾವಿರ ಪ್ರದೇಶದ ಒಂದು ಭಾಗ. ಈ ಪ್ರದೇಶವು ಸಾಮಾನ್ಯವಾಗಿ ನೊಳಂಬರ ಅಧೀನದಲ್ಲಿರುತ್ತಿದ್ದಿತು.

**ಕರಿಕನಾಡು**

ಕ್ರಿ.ಶ.ಸು. ೬೫೦ರ ಶಾಸನವೊಂದರಲ್ಲಿ (ದಾಸರಳ್ಳಿ, ಬೆಂಗಳೂರು ತಾಲ್ಲೂಕು)[12] ಈ ನಾಡಿನ ಪ್ರಸ್ತಾಪ ಬಂದಿದೆ. ಬಿದಿರ್ಕ್ಕಲ್ಲು ಗ್ರಾಮ ಈ ನಾಡಿನಲ್ಲಿದ್ದ ಸ್ಥಳವೆಂದು ಅದೇ ಶಾಸನದಿಂದ ತಿಳಿದುಬರುತ್ತದೆ. ಇದು ಈಗಿನ ಯಶವಂತಪುರ ತಾಲ್ಲೂಕಿನ ದೊಡ್ಡ ಬಿದರಕಲ್ಲು ಗ್ರಾಮವೇ ಆಗಿದೆ. ಕರಿಕನಾಡು ಬೆಂಗಳೂರು ನಗರದ ಉತ್ತರಕ್ಕಿರುವ ಯಶವಂತಪುರ, ಯಲಹಂಕ ಪ್ರದೇಶಗಳನ್ನೊಳಗೊಂಡ ಪ್ರದೇಶವಾಗಿದ್ದಿರಬೇಕು.

**ಕೆಳ್ಗಲಿ ನಾಡು**

ಕ್ರಿ. ಶ. ಸು. ೬೫೦ ಐಜೂರಿನ ವೀರಗಲ್ಲು ಶಾಸನವೊಂದರಲ್ಲಿ 'ಕೆಳ್ಗಲಿನಾಡು' ಎಂಬ ಉಲ್ಲೇಖವಿದೆ.[13] 'ಕೆಳ್ಗಲಿ' ಎಂಬುದು ಮುಂದೆ ಕಾಣಸಿಕೊಳ್ಳುವ ಕೆಳಲೆ ಅಥವಾ ಕಲುವಳಿನಾಡುಗಳೊಂದರ ಪೂರ್ವನಾಮವಿದ್ದಂತೆ ತೋರುತ್ತದೆ.

---

8. ಅದೇ, ಚನ್ನಪಟ್ಟಣ ೩೮, ಕ್ರಿ. ಶ. ೧೨೬೦
9. ಅದೇ, ೪೨, ಕ್ರಿ. ಶ. ೧೦೧೮
10. ಅದೇ, ಬೆಂಗಳೂರು ೪೩
11. ಅದೇ, ಹೊಸಕೋಟೆ ೯
12. ಅದೇ, ಬೆಂಗಳೂರು ೩೬
13. ಅದೇ, ಬೆಂಗಳೂರು ೪೦

**ಮೊರಸುನಾಡು**

ಈ ನಾಡಿನ ಪ್ರಾಚೀನತಮ ಉಲ್ಲೇಖ ಬೆಂಗಳೂರು ದಕ್ಷಿಣ ತಾಲ್ಲೂಕಿನ ವರ್ತೂರು ಗ್ರಾಮದ ಕ್ರಿ. ಶ. ಸು. ೮೨೦ರ ಶಾಸನದಲ್ಲಿ ಬಂದಿದೆ.[14] ಮೊರಸುನಾಡು 'ಗಂಗ ಆರುಸಾವಿರ' ಪ್ರದೇಶದ ಭಾಗ. 'ಮೆರೂರು-ಕುನ್ದಾಡಿ' ಮತ್ತು 'ಎರೆಯುಪ-ಮಂಗಲ'ಗಳು ಈ ನಾಡಿನ ಶಾಸನೋಕ್ತ ಗ್ರಾಮಗಳು. ಆನೇಕಲ್ಲು ತಾಲ್ಲೂಕಿನ ಹಳೇ–ಹಳ್ಳಿ ಗ್ರಾಮದ ಚೋಳರ ಶಾಸನದಲ್ಲಿ (ಕ್ರಿ. ಶ. ೧೨೪೫) ಈ ನಾಡನ್ನು 'ಮುರುಶುನಾಡು' ಎಂದು ಕರೆದಿದೆ.[15] ಇದು ರಾಜೇನ್ದ್ರಚೋಳ (ವಳ) ನಾಡಿನ ಭಾಗವೆಂದು ಇದೆ. ಇದೇ ತಾಲ್ಲೂಕಿನ ಇಗ್ಗಲೂರಿನ ಕ್ರಿ. ಶ. ೧೩೩೦ರ ಶಾಸನ ಮತ್ತು ಬೆಂಗಳೂರು ದಕ್ಷಿಣ ತಾಲ್ಲೂಕಿನ ಬೇಗೂರು ಗ್ರಾಮದ ಶಾಸನ (ಕ್ರಿ. ಶ. ೧೧೧೧)ಗಳಲ್ಲಿ ಉಕ್ತವಾಗಿದೆ.[16] ಮುಡಿಗೊಂಡ ಚೋಳ ಮಂಡಲದ ಭಾಗವಾದ ಇದು, ಬೆಂಗಳೂರು ದಕ್ಷಿಣ ತಾಲ್ಲೂಕಿನ ಕೆಲವು ಗ್ರಾಮಗಳು, ಹೊಸಕೋಟೆ, ಆನೇಕಲ್ಲು ಮತ್ತು ಧರ್ಮಪುರಿ ಜಿಲ್ಲೆಯ ಹೊಸೂರು, ಡೆಂಕಣಿಕೋಟೆ ತಾಲ್ಲೂಕುಗಳು ಮತ್ತು ಕೋಲಾರ ಜಿಲ್ಲೆಯ ಪಶ್ಚಿಮ ಮತ್ತು ದಕ್ಷಿಣಪ್ರದೇಶದ ತಾಲ್ಲೂಕುಗಳ ಅನೇಕ ಗ್ರಾಮಗಳನ್ನೊಳಗೊಂಡ ಪ್ರದೇಶವು ಈ ನಾಡಿನಲ್ಲಿ ಸಮಾವೇಶಗೊಂಡಿದ್ದಿತೆಂದು ಹೇಳಬಹುದು.

**ಬೆಂಪೂರು ಹನ್ನೆರಡು**

ಪ್ರಸಿದ್ಧ ಬೇಗೂರು ವೀರಗಲ್ಲು ಶಾಸನದಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಈ ನಾಡು ಗಂಗವಾಡಿ ಪ್ರಾಂತ್ಯದ ಹನ್ನೆರಡು ಗ್ರಾಮಗಳನ್ನೊಳಗೊಂಡಂಥ ಒಂದು ಉಪವಿಭಾಗ. ಅದೇ ಶಾಸನದಲ್ಲಿ ಪ್ರಯುಕ್ತವಾಗಿರುವ ಗ್ರಾಮಗಳಲ್ಲಿ ಇಂದು ಕೂಡ ಹಲವಾರು ಗ್ರಾಮಗಳನ್ನು ಗುರುತಿಸಬಹುದಾಗಿದೆ. ಉದಾ : ಬೆಂಪೂರು (ಬೇಗೂರು), ತೊವಗೂರು (ತೋಗೂರು), ಪೂವಿನಪುಲ್ಲಿಮಂಗಲ (ಹುಲಿಮಂಗಲ), ಇಗ್ಗುಲೂರು (ಇಗ್ಗಲೂರು), ಕೂಡಲ್ (ಕೂಡಲು), ಸಾರಮು (ಸಾರಕ್ಕಿ?)[17] ಮುಂದಿನ ಶತಮಾನಗಳಲ್ಲಿ ಈ ಪ್ರದೇಶವೇ ವೆಪ್ಪೂರುನಾಡು (ನೋಡಿ: ವೆಪ್ಪೂರುನಾಡು) ಎಂದು ಕರೆಯಲ್ಪಟ್ಟಿರುವುದು ಕಂಡು ಬರುತ್ತದೆ.

**ಮಣ್ಣೆನಾಡು ೩೦೦**

ಮಾಗಡಿ ತಾಲ್ಲೂಕಿನ ಉಡುಗುಂಟೆಯ ಮಜರೆ ಮೂಡ್ಲುಪಾಳ್ಯದ ಕ್ರಿ. ಶ. ೯೭೭ರ ಶಾಸನದಲ್ಲಿ 'ಮಣ್ಣೆನಾಡು ೩೦೦' ಮತ್ತು 'ಮಣ್ಣೆಸೀಮಾ' ಎಂಬ ಉಲ್ಲೇಖಗಳಿವೆ.[18] ನೆಲಮಂಗಲ ತಾಲ್ಲೂಕಿನ ಸೋಲದೇವನಹಳ್ಳಿ (ಕ್ರಿ. ಶ. ೧೦೨೯), ಮಂಡಿಕೆರೆ (ಕ್ರಿ. ಶ. ೧೦೫೦) ಶಾಸನಗಳಲ್ಲಿ ಮಣ್ಣೆನಾಡು ವಿಕ್ರಮ ಚೋಳಮಂಡಲದ ಭಾಗವೆಂದು ಉಕ್ತವಾಗಿದೆ.[19]

**ನೆಕ್ಕುಂದಿನಾಡು**

ಕ್ರಿ. ಶ. ಸು. ೯೫೦ರ ಹೊಸಕೋಟೆ ತಾಲ್ಲೂಕಿನ ಕೊಂಡಹಳ್ಳಿ ಗ್ರಾಮದ ಶಾಸನದಲ್ಲಿ ಈ ನಾಡು ಉಕ್ತವಾಗಿದೆ.[20] ಇದೇ ತಾಲ್ಲೂಕಿನ ಈಗಿನ ನೆಕ್ಕುಂದಿ ಗ್ರಾಮವನ್ನು ಕೇಂದ್ರವಾಗಿಟ್ಟುಕೊಂಡು ಸುತ್ತಲ ಅನೇಕ ಗ್ರಾಮಗಳನ್ನೊಳಗೊಂಡ ಪ್ರದೇಶ ಇದಾಗಿರಬೇಕು. ಇದೇ ಸಂದರ್ಭದಲ್ಲಿ ಕೋಲಾರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನ ನೆಕ್ಕುಂದಿ ಎಂಬ ಗ್ರಾಮವು ಕೂಡ ಪ್ರಾಚೀನವಾದುದು ಎಂಬುದನ್ನು ಪರಿಗಣಿಸಬೇಕಾಗುತ್ತದೆ.

---

14. ಅದೇ, ಬೆಂಗಳೂರು ೪೦
15. ಅದೇ, ಆನೇಕಲ್ಲು ೪೬, ಸು. ಕ್ರಿ. ಶ. ೧೨೭೪
16. ಅದೇ, ಆನೇಕಲ್ಲು ೬೨ ಮತ್ತು ಬೆಂಗಳೂರು ೮೫ ಸಿ
17. ದೇವರ ಕೊಂಡಾರೆಡ್ಡಿ: 'ಬೇಗೂರು ಒಂದು ಅಧ್ಯಯನ', ಸಾಧನೆ, ಸಂಪುಟ ೩, ಸಂಚಿಕೆ ೨, ೧೯೭೪, ಪು. ೯
18. ಎ. ಕ., ೯, ಮಾಗಡಿ ೭೫
19. ಅದೇ, ನೆಲಮಂಗಲ ೧ ಮತ್ತು ೨೫
20. ಅದೇ, ಹೊಸಕೋಟೆ ೩೭

## ಪುನ್ನಾಡ ೭೦

ಕ್ರಿ.ಶ. ಸು. ೯೦೦ರ ದೇವನಹಳ್ಳಿ ತಾಲ್ಲೂಕಿನ ಅರ ದೇಶನಹಳ್ಳಿ ಗ್ರಾಮದ ಶಾಸನಗಳಲ್ಲಿ 'ಪುನ್ನಾಡು' ಎಂದು ಕರೆಯಲ್ಪಟ್ಟಿರುವ ಈ ನಾಡಿನಲ್ಲಿ 'ಪುಲ್ಲಮಂಗಲ' ಎಂಬ ಗ್ರಾಮವಿದ್ದ ಬಗ್ಗೆ ಉಲ್ಲೇಖವಿದೆ. 21 ದೊಡ್ಡಬಳ್ಳಾಪುರ ತಾಲ್ಲೂಕಿನ ಶಿವಪುರದ ಶಾಸನದಲ್ಲಿ 'ಪುಣ್ಣಾಡಯಪತ್ತ ನಾಡು' ಎಂದು ಉಕ್ತವಾಗಿದೆ. 22 ದೇವನಹಳ್ಳಿ ಮತ್ತು ದೊಡ್ಡಬಳ್ಳಾಪುರ ತಾಲ್ಲೂಕಿನ ಸಾಂಪ್ರದಾಯಿಕವಾಗಿ ೭೦ ಗ್ರಾಮಗಳನ್ನೊಳಗೊಂಡ ಒಂದು ಆಡಳಿತ ವಿಭಾಗ ಇದಾಗಿದ್ದಿತು. ಮೈಸೂರು ಜಿಲ್ಲೆಯ ದಕ್ಷಿಣಭಾಗವನ್ನು 'ಪುನ್ನಾಡು' ಎಂದು ಇತಿಹಾಸಕಾರರು ಗುರುತಿಸಿರುತ್ತಾರೆ. ಅದು ಈ ನಾಡಿಗಿಂತ ಭಿನ್ನವಾದುದು ಮತ್ತು ಹೆಚ್ಚು ವಿಸ್ತಾರವಾದುದೆಂದು ತೋರುತ್ತದೆ.

## ಕೈವಾರನಾಡು

ಕ್ರಿ.ಶ. ೧೦೪೧ರ ಹೊಸಕೋಟೆ ತಾಲ್ಲೂಕಿನ ಸಿದ್ಧನ ಹಳ್ಳಿಯ ರಾಜೇನ್ದ್ರಚೋಳನ ಕನ್ನಡ ಶಾಸನದಲ್ಲಿ 'ಸಚುಕ್ಕನೂಚು ಕೈಯ್ವಾರನಾಡಲ್ಲಿ' ಅಂತರ್ಗತವಾಗಿದ್ದ ಬಗ್ಗೆ ಉಲ್ಲೇಖವಿದೆ.23 ಇದೇ ತಾಲ್ಲೂಕಿನ ಹೋಬೇನ ಹಳ್ಳಿ (ಕ್ರಿ. ಶ. ೧೧೪೫),24 ಕೊಂಡಹಳ್ಳಿ (ಕ್ರಿ. ಶ. ೧೦೬೫),25 ನೆಲವಾಗಲಹಳ್ಳಿ (ಕ್ರಿ. ಶ. ೧೩೪೦),26 ಬೇಚಿರಾಕ್ ಮಾರೇನಹಳ್ಳಿ (ಕ್ರಿ. ಶ. ೧೦೭೫)27- ಈ ಗ್ರಾಮಗಳ ಶಾಸನಗಳಲ್ಲೂ ಈ ನಾಡು ಉಲ್ಲೇಖಗೊಂಡಿದೆ. ಸಚುಕ್ಕನೂಚು (ಚಚುಕ್ಕನೂರು>), ನುಣ್ಡುಕೊಳ್ಳಿ, ನೆಲವಾಯ್‌ಪಳ್ಳಿ, ನಿಲತ್ತೂರ್, ಪೆಲಬಾಳಪುರ ಗ್ರಾಮಗಳೂ ಶಾಸನೋಕ್ತವಾಗಿವೆ. ಈ ನಾಡನ್ನು 'ಕೈವಾರನಾಟ್ಟು' ಎಂದು ತಮಿಳು ಶಾಸನಗಳು ಕರೆದಿವೆ. ಈ ನಾಡು ನಿಗರಿಲಿ ಚೋಳಮಂಡಲದ ಭಾಗವೆಂದು ಹೋಬಳೇನಹಳ್ಳಿ ಶಾಸನದಲ್ಲಿ (ಕ್ರಿ. ಶ. ೧೧೪೫)28 ಕರೆದಿದ್ದರೆ, ಕ್ರಿ. ಶ, ೧೦೬೫ರ ಕೊಂಡಹಳ್ಳಿ ಶಾಸನದಲ್ಲಿ ವಿಜಯರಾಜೇನ್ದ್ರ ಚೋಳಮಂಡಲದ ಭಾಗವೆಂದು ಉಲ್ಲೇಖವಾಗಿದೆ.29 'ಕೈವಾರ' ಎಂಬುದು ಹೊಸಕೋಟೆ ತಾಲ್ಲೂಕಿನ ಪೂರ್ವದ ಗಡಿಯಲ್ಲಿರುವ ಕೋಲಾರ ಜಿಲ್ಲಾ ಚಿಂತಾಮಣಿ ತಾಲ್ಲೂಕಿನ ಒಂದು ಪ್ರಮುಖ ಗ್ರಾಮ. ಇಂದಿನ ಕೈವಾರ ಗ್ರಾಮವನ್ನು ಕೇಂದ್ರವಾಗಿಟ್ಟುಕೊಂಡು ಹೊಸಕೋಟೆ ತಾಲ್ಲೂಕಿನ ಹಲವಾರು ಗ್ರಾಮಗಳು, ಕೋಲಾರ ಜಿಲ್ಲೆಯ ಚಿಂತಾಮಣಿ, ಮಾಲೂರು, ಕೋಲಾರ ತಾಲ್ಲೂಕುಗಳ ಹಲವಾರು ಗ್ರಾಮಗಳು ಈ ನಾಡಿನಲ್ಲಿ ಅಂತರ್ಗತವಾಗಿದ್ದವು.

## ಕೆಱೆಕುನ್ದಾ ೩೦೦

ಕ್ರಿ. ಶ. ಸು. ೭೨೦ರ ಹೊಸಕೋಟೆ ತಾಲ್ಲೂಕಿನ ಮಾರೇನಹಳ್ಳಿ ಗ್ರಾಮದ ಗಂಗ ಶ್ರೀಪುರುಷನ ಕಾಲದ ಶಾಸನವೊಂದರಲ್ಲಿ 'ಕೆಱೆಕುನ್ದಾ ಮೂನೂಱು' ಎಂಬ ಪ್ರಾದೇಶಿಕ ವಿಭಾಗದ ಉಲ್ಲೇಖವಿದೆ.30 ಈ ಪ್ರದೇಶದಲ್ಲಿ ಸಾಂಪ್ರದಾಯಿಕವಾಗಿ ೩೦೦ ಗ್ರಾಮಗಳನ್ನೊಳಗೊಂಡಂತೆ ಹೊಸಕೋಟೆ ತಾಲ್ಲೂಕಿನ ಭಾಗವು ಅಂತರ್ಗತವಾಗಿದ್ದಿತೆಂದು ತೋರುವುದು.

---

21. ಅದೇ, ದೇವನಹಳ್ಳಿ ೪೧
22. ಅದೇ, ದೊಡ್ಡಬಳ್ಳಾಪುರ, ೩೮, ಕ್ರಿ. ಶ. ೧೩೨೮
23. ಅದೇ, ಹೊಸಕೋಟೆ ೧೧, ಕ್ರಿ. ಶ. ೧೦೪೧
24. ಅದೇ, ೪೦
25. ಅದೇ, ೩೬
26. ಅದೇ, ೪೯
27. ಅದೇ, ೧೦೧
28. ಅದೇ, ೪೦
29. ಅದೇ, ೩೬
30. ಅದೇ, ೮೬

## ಕುಣುಂಗಿ ೫೦೦

ಕ್ರಿ. ಶ. ಸುಮಾರು ೯೦೦ರ ದೇವನಹಳ್ಳಿ ತಾಲ್ಲೂಕಿನ ಅರದೇಶಹಳ್ಳಿ ಶಾಸನದಲ್ಲಿ 'ಕುಣುಂಗಿ ಅಯ್ನೂಱು' ಎಂಬ ಉಲ್ಲೇಖವಿದೆ. ಅಲ್ಲದೆ 'ನನ್ದಿಗುನ್ದಂ', 'ನನ್ದಿಯಸ್ತಾನ' ಎಂಬ ಸ್ಥಳಗಳ ಉಲ್ಲೇಖಗಳೂ ಇವೆ.[31] ಇವುಗಳಲ್ಲಿ 'ನನ್ದಿಯಸ್ಥಾನ' ಎಂಬುದು ಪ್ರಸಿದ್ಧವಾದ ನನ್ದಿದುರ್ಗವನ್ನು ಕುರಿತದ್ದೆ ಆಗಿದೆ.

## ಸಟ್ಟಿ ೩೦೦/ಸಣ್ಣೆನಾಡು

ಕ್ರಿ. ಶ. ಸು. ೯೦೦ರ ದೇವನಹಳ್ಳಿ ತಾಲ್ಲೂಕಿನ ಅರದೇಶಹಳ್ಳಿಯ ರಾಷ್ಟ್ರಕೂಟರ ಶಾಸನದಲ್ಲಿ 'ಸಟ್ಟಿಮೂನೂಱಂ' ಎಂಬ ಉಲ್ಲೇಖ ದೊರೆಯುತ್ತದೆ.[32] ಇದೇ ತಾಲ್ಲೂಕಿನ ಬ್ಯಾಡರಹಳ್ಳಿ ಶಾಸನದಲ್ಲಿ (ಕ್ರಿ. ಶ. ೧೦೬೭) ಸಣ್ಣೆನಾಡಿನ ತಿಪ್ಪೂರು ವಿಕ್ರಮ ಚೋಳಮಂಡಲದ ಭಾಗವೆಂದು ಉಲ್ಲೇಖವಾಗಿದೆ.[33] ಗಂಗವಾರ (ಕ್ರಿ. ಶ. ೧೦೪೬ ಮತ್ತು ೧೦೫೦),[34] ಪಟ್ಟನ್ದೂರು (ಕ್ರಿ. ಶ. ೧೩೪೩),[35] ಆವತಿ (ಕ್ರಿ. ಶ. ೧೨೮೩) ಮತ್ತು ಕಾರಹಳ್ಳಿ (ಕ್ರಿ. ಶ. ೧೧೩೩)[36] ಗ್ರಾಮಗಳ ಶಾಸನಗಳಲ್ಲಿ ಈ ನಾಡಿನ ಉಲ್ಲೇಖವಿದ್ದು, ಆವತ್ತಿಯೂರ್, ಕೊಡವತ್ತಿ, ಪ್ಪೊಳ್ವಿಮಾಂಪಳ್ಳಿ (ನಂದಿಸಮುದ್ರ) ಗ್ರಾಮಗಳು ಉಲ್ಲೇಖಿಸಲ್ಪಟ್ಟಿವೆ. ಈ ನಾಡಿನ ದಕ್ಷಿಣಕ್ಕೆ 'ತೊಱವಳವಿತ್ತಿ'ಯು ಇದ್ದಿತೆಂದು ಶಾಸನವೊಂದು ಉಲ್ಲೇಖಿಸುತ್ತದೆ.[37]

## ಬಿದೆಕಂಡ

ಸು. ಕ್ರಿ. ಶ. ೯೫೦ರ ಬೆಂಗಳೂರು ತಾಲ್ಲೂಕಿನ ಶಾಸನವೊಂದರಲ್ಲಿ ಕಾಮಪುರ ಮತ್ತು ಮದಂಬ-ಪಟ್ಟಣಗಳು ಬಿದೆಕಂಡನಾಡಿನಲ್ಲಿ ಸಮಾವೇಶವಾಗಿರುವ ಬಗ್ಗೆ ಸೂಚನೆ ಕೊಡುತ್ತವೆ.[38]

## ಕುಕ್ಕನರೆನಾಡು ಅಥವಾ ಕುಕ್ಕನೂರುನಾಡು

ಕ್ರಿ. ಶ. ಸುಮಾರು ೭೫೦ರ ತೋಟಗೆರೆ ಶಾಸನದಲ್ಲಿ 'ಕುಕ್ಕನೆರೆನಾಡು' ಎಂದು ಕರೆಯಲ್ಪಟ್ಟಿರುವ ಈ ನಾಡಿನಲ್ಲಿ ತಳಾವೂರ ಪೂಗುಣ್ಡಿ ಗ್ರಾಮಗಳು ಶಾಸನೋಕ್ತವಾಗಿವೆ.[39] ಕ್ರಿ. ಶ. ೧೦೩೩ರ ನೆಲಮಂಗಲ ತಾಲ್ಲೂಕಿನ ಅಯಿಗಂಡಪುರದ ಶಾಸನದಲ್ಲಿ ಈ ನಾಡು ಉಲ್ಲೇಖಿತವಾಗಿದೆ ಮತ್ತು ವಾಣಪುರ ಗ್ರಾಮವು ಶಾಸನೋಕ್ತ ಗ್ರಾಮವಾಗಿದೆ.[40] ಅಯಿಗಂಡಪುರದ ಇನ್ನೊಂದು ಶಾಸನದಲ್ಲಿ (ಕ್ರಿ. ಶ. ೧೧೧೩) ಕುಕ್ಕನೂರುನಾಡು ವಿಕ್ರಮ ಚೋಳಮಂಡಲದ ಭಾಗವೆಂಬ ಅಂಶ ತಿಳಿದು ಬರುತ್ತದೆ. ಅಲ್ಲದೆ, 'ಪೆರಿಯ ಮುತ್ತಕೂರು' ಎಂಬುದು ಐಗಂಡಪುರದ ಇನ್ನೊಂದು ಹೆಸರು ಎಂಬ ಅಂಶವೂ ಇದೇ ಶಾಸನದಿಂದ ಸ್ಪಷ್ಟಪಡುತ್ತದೆ.[41] ಈ ಊರನ್ನು ಐವರಗಂಡಪುರವೆಂದು ಕರೆದಿರುವ ಉಲ್ಲೇಖಗಳಿವೆ. ನೆಲಮಂಗಲ ತಾಲ್ಲೂಕಿನ ಸೋಲದೇವನಹಳ್ಳಿಯ ಕ್ರಿ. ಶ. ೧೦೨೯ರ ಶಾಸನವೊಂದರಲ್ಲಿ 'ಕುಕ್ಕನೂರುನಾಡ'ನ್ನು ಹೆಸರಿಸಿದೆ. ಇದೇ ತಾಲ್ಲೂಕಿನ ಬಿನ್ನಮಂಗಲ, ನಕ್ಕೂರು, ಮಣೆಪುರ

---

31. ಅದೇ, ದೇವನಹಳ್ಳಿ ೪೨
32. ಅದೇ
33. ಅದೇ, ೧೪
34. ಅದೇ, ೭೫ ಮತ್ತು ೭೬
35. ಅದೇ, ಬೆಂಗಳೂರು ೪೧
36. ಅದೇ, ದೇವನಹಳ್ಳಿ ೨೮ ಮತ್ತು ೨೦
37. ಅದೇ, ಬೆಂಗಳೂರು ೪೧
38. ಅದೇ, ೮೫
39. ಅದೇ, ನೆಲಮಂಗಲ ೩೮
40. ಅದೇ, ೩೭, ಕ್ರಿ. ಶ. ೧೦೩೩
41. ಅದೇ, ೩೮ ಎ, ಕ್ರಿ. ಶ. ೧೧೧೩

ಗ್ರಾಮಗಳ ಶಾಸನಗಳಲ್ಲೂ ಈ ನಾಡಿನ ಉಲ್ಲೇಖಗಳು ಕಂಡುಬರುತ್ತವೆ.

## ಕುಕ್ಕರಪಾೞಿಕ್ಕಾಱ್ನಾಡು ಅಥವಾ ಕುಕ್ಕಲನಾಡು

ಕ್ರಿ.ಶ. ಸು. ೭೫೦ರ ಬೆಂಗಳೂರು ತಾಲ್ಲೂಕಿನ ದಾಸರಹಳ್ಳಿ ಗ್ರಾಮದ ಶಾಸನದಲ್ಲಿ 'ಕುಕ್ಕರಪಾಟಿಕ್ಕಾಱ್ನಾಡು' ಉಲ್ಲೇಖಗೊಂಡಿದೆ.[42] ಕ್ರಿ. ಶ. ೧೧೫೬ರ ಬೆಂಗಳೂರು ತಾಲ್ಲೂಕಿನ ವಸಂತಹಳ್ಳಿ ಗ್ರಾಮದ ಶಾಸನದಲ್ಲಿ, ಪೆಱಕಡಿ, ತಿಪ್ಪೂರು ನಗರಗಳು ಕುಕ್ಕಲನಾಡಿನಲ್ಲಿ ಸಮಾವೇಶವಾಗಿದ್ದ ಬಗ್ಗೆ ಆಧಾರ ದೊರೆಯುತ್ತದೆ.[43] ಇದೇ ತಾಲ್ಲೂಕಿನ ಬ್ಯಾಡರಹಳ್ಳಿ, ಹಲಗೆವಡೇರನಹಳ್ಳಿ ರಾಮಸಮುದ್ರ ಗ್ರಾಮಗಳ ಶಾಸನಗಳಲ್ಲೂ ಮಾಗಡಿ ತಾಲ್ಲೂಕಿನ ಕ್ರಿ.ಶ. ೧೩೪೦ರ ಬೈಚಗುಪ್ಪೆ ಶಾಸನದಲ್ಲೂ ಚನ್ನಪಟ್ಟಣ ತಾಲ್ಲೂಕಿನ (ಈಗಿನ ರಾಮನಗರ ತಾಲ್ಲೂಕಿನ ?) ಹಾಗಲಹಳ್ಳಿ ಶಾಸನದಲ್ಲೂ (ಕ್ರಿ. ಶ. ೧೩೩೪)[44] ಕುಕ್ಕಲನಾಡು ಪ್ರಸ್ತಾಪಗೊಂಡಿದೆ. ಅಲ್ಲದೆ, ಕ್ರಿ. ಶ. ೧೩೩೦ರ ನೆಲಮಂಗಲ ತಾಲ್ಲೂಕಿನ ಕಿತ್ತನಲ್ಲಿ ಗ್ರಾಮದ ಶಾಸನ ಮತ್ತು ಅದೇ ತಾಲ್ಲೂಕಿನ ಬಾಣಸವಾಡಿ ಗ್ರಾಮದ ಕ್ರಿ.ಶ. ೧೩೪೦ರ ಶಾಸನಗಳಲ್ಲೂ ಈ ನಾಡಿನ ಉಲ್ಲೇಖಗಳಿವೆ.[45] ಒಟ್ಟಾರೆ, ಈ ನಾಡಿನಲ್ಲಿ ಅಂತರ್ಗತವಾಗಿರುವ ಶಾಸನೋಕ್ತ ಗ್ರಾಮಗಳೆಂದರೆ– ರಾಮಸಮುದ್ರ, ಪೆಱಕಡಿ, ತಿಪ್ಪೂರುನಗರ, ಕಿತ್ತನೆಲ್ಲೆ, ಚಟ್ಟನಕುಂಟೆ (>ಬಯಿರವ್ವೆಹಳ್ಳಿ) ಮುಂತಾದವು. ಬೆಂಗಳೂರು ತಾಲ್ಲೂಕಿನ ಪಶ್ಚಿಮ ಪ್ರದೇಶವೂ ಸೇರಿದಂತೆ ರಾಮನಗರ ತಾಲ್ಲೂಕಿನ ಪೂರ್ವಭಾಗ, ಮಾಗಡಿ ತಾಲ್ಲೂಕಿನ ಪಶ್ಚಿಮಭಾಗದ ಹಲವಾರು ಗ್ರಾಮಗಳು, ನೆಲಮಂಗಲ ತಾಲ್ಲೂಕಿನ ಕೆಲವು ಗ್ರಾಮಗಳನ್ನು ಒಳಗೊಂಡಂತೆ ಈ ಕುಕ್ಕಲನಾಡು ಎಂಬ ಪ್ರಾದೇಶಿಕ ವಿಭಾಗ ಅಸ್ತಿತ್ವದಲ್ಲಿತ್ತು.

## ಕಲುವಳಿನಾಡು ಅಥವಾ ಕೆಳವಲನಾಡು

ಚನ್ನಪಟ್ಟಣ ತಾಲ್ಲೂಕಿನ ಚನ್ನಮಾನಹಳ್ಳಿ, ಮಾಗೇನಹಳ್ಳಿ ಗ್ರಾಮಗಳ ಶಾಸನಗಳಲ್ಲಿ ಕಲುವಳಿನಾಡು, ಕೆಳವಲನಾಡು ಎಂದು ಕರೆಯಲ್ಪಟ್ಟಿದೆ.[46] ವಡಗಟ್ಟದ ಕ್ರಿ.ಶ. ೧೩೩೫ರ ಶಾಸನವೊಂದರಲ್ಲಿ 'ಕಲುವೊಳೆನಾಡು' ಎಂಬ ಪ್ರಯೋಗ ಕಂಡುಬರುತ್ತದೆ.[47] 'ಕೆಲುವಳಿನಾಡು' ಎಂದು ಈ ನಾಡನ್ನು ಕರೆದಿರುವ ಉಲ್ಲೇಖಗಳೂ ಉಂಟು.[48] ಈ ನಾಡಿನಲ್ಲಿ ಚಂದಿಮಾದಿಯಹಳ್ಳಿ, ಮಡಗುಟ್ಟೆ, ವೀರಂಣಿಗನಹಳ್ಳಿ, ಚಂನಮಾದಿಹಳ್ಳಿ, ಹೊಂಗನೂರು, ತಾಳವಾಡಿ, ಗಂಗವಾಡಿ, ಮಿಳೆಹಳ್ಳಿ, ವೆಟ್ಟಜೀಯಗಉಂಡನಹಳ್ಳಿ, ಅರೆಗೊಳಲು, ಐಜೂರು, ಮಗುವನಹಳ್ಳಿ>ಮುಗುಳನಹಳ್ಳಿ, ಮಾರಪ್ಪನ ಕುಪ್ಪೆ, ಬೆಳತೂರು ಮುಂತಾದ ಗ್ರಾಮಗಳು ಶಾಸನೋಕ್ತವಾಗಿವೆ. ಚನ್ನಪಟ್ಟಣ, ರಾಮನಗರ ತಾಲ್ಲೂಕಿನ ಬಹುಭಾಗ, ಪ್ರಾಯಶಃ ಈ ನಾಡಿನಲ್ಲಿ ಅಂತರ್ಗತವಾಗಿದ್ದಿರಬೇಕೆಂದು ತೋರುತ್ತದೆ.

## ಮುಡಿಗೊಣ್ಡ ಚೋಳಮಂಡಲ

ಚೋಳರ ಕಾಲದ ಒಂದು ದೊಡ್ಡ ಆಡಳಿತ ವಿಭಾಗ. ಈ ವಿಭಾಗದಲ್ಲಿ ರಾಜೇನ್ದ್ರ ಚೋಳ ವಳ

---

42. ಅದೇ, ಬೆಂಗಳೂರು ೩೬
43. ಅದೇ, ಮಾಗಡಿ ೮೧
44. ಅದೇ, ಚನ್ನಪಟ್ಟಣ ೭
45. ಅದೇ, ನೆಲಮಂಗಲ ೧೨ ಮತ್ತು ೧೯
46. ಅದೇ, ಚನ್ನಪಟ್ಟಣ ೧೨, ೭೩
47. ಅದೇ, ೧೭೮
48. ಅದೇ, ೧೮೫

ನಾಡು, ಕರಿಕಾಲ ಚೋಳ ವಳನಾಡುಗಳೂ ಕಿಟಿಲ್ವೆ ನಾಡು, ಮುರುಶುನಾಡು, ಶಿಯಲ್‌ನಾಡು (ಶಿಗಲ್ ನಾಡು) ಮುಂತಾದುವೂ ಸಮಾವೇಶಗೊಂಡಿದ್ದವು ಎಂಬ ಅಂಶ ಈ ಜಿಲ್ಲೆಯ ಚೋಳರ ಕಾಲದ ಅನೇಕ ಶಾಸನಗಳಿಂದ ತಿಳಿದುಬರುತ್ತದೆ.[49] ಒಟ್ಟಾರೆ ಬೆಂಗಳೂರು ಜಿಲ್ಲೆಯ ದಕ್ಷಿಣ ಮತ್ತು ಪಶ್ಚಿಮಭಾಗದ ನಾಡುಗಳು ಈ ಮಂಡಲಕ್ಕೆ ಸೇರಿದ್ದವು.

### ವಿಕ್ರಮ ಚೋಳಮಂಡಲ

ಕ್ರಿ.ಶ. ೧೦೪೬ರ ದೇವನಹಳ್ಳಿ ತಾಲ್ಲೂಕಿನ ಗಂಗವಾರ,[50] ಬ್ಯಾಡರಹಳ್ಳಿ (ಕ್ರಿ.ಶ. ೧೦೬೭), ಸೋಲದೇವನಹಳ್ಳಿ (ಕ್ರಿ.ಶ. ೧೦೨೯)[51] ಶಾಸನಗಳು ಈ ನಾಡಿನ ಅಸ್ತಿತ್ವವನ್ನು ಪ್ರತಿನಿಧಿಸುತ್ತವೆ. 'ಸಣ್ಣೆನಾಡು', 'ಕುಕ್ಕನೂರುನಾಡು', 'ಮಣ್ಣೆನಾಡು'ಗಳು ವಿಕ್ರಮ ಚೋಳ ಮಂಡಲದಲ್ಲಿ ಅಂತರ್ಗತವಾಗಿದ್ದ ನಾಡುಗಳೆಂದು ತಿಳಿದು ಬರುತ್ತದೆ.

### ನಿಗರಿಲಿ ಚೋಳಮಂಡಲ

ಈ ಮಂಡಲದಲ್ಲಿ ಮಣ್ಣೆನಾಡು ಅಂತರ್ಗತವಾಗಿದ್ದ ಬಗ್ಗೆ ಕ್ರಿ.ಶ. ೧೧೧೫ರ ನೆಲಮಂಗಲ ತಾಲ್ಲೂಕಿನ ಹೆಗ್ಗುಂದ ಗ್ರಾಮದ ಶಾಸನವು ಆಧಾರವಾಗಿದೆ.[52] ಕ್ರಿ.ಶ. ೧೩೬೫ರ ಮಡಿವಾಳ ಗ್ರಾಮದ ಶಾಸನದಲ್ಲೂ ಈ ಮಂಡಲದ ಹೆಸರು ಉಕ್ತವಾಗಿದೆ.[53] ಅಲ್ಲದೆ, ರಾಜೇಂದ್ರ ಚೋಳ ವಳನಾಡು ಇದೇ ಮಂಡಲದ ಭಾಗವೆಂದೂ ತಿಳಿಸುತ್ತದೆ.[54] ಹೊಸಕೋಟೆ ತಾಲ್ಲೂಕಿನ ನಿಡುಗಟ್ಟ ಗ್ರಾಮದ ಶಾಸನವು ಪುಲ್ಲಿಯೂರುನಾಡು ನಿಗರಿಲಿ ಚೋಳಮಂಡಲದ ಭಾಗವೆಂದು ತಿಳಿಸುತ್ತದೆ.[55] ಯಲಹಂಕ ನಾಡು (ಇಳೈಪಾಕ್ಕನಾಡು), ವೆಪ್ಪೂರುನಾಡು (ಬೇಗೂರುನಾಡು), ಮಾಶಂಡಿನಾಡುಗಳು ಇದೇ ಮಂಡಲದ ಭಾಗಗಳೆಂದು ಹೇಳಬಹುದು. ಸ್ಥೂಲವಾಗಿ, ಈಗಿನ ಬೆಂಗಳೂರು ಜಿಲ್ಲೆಯ ಉತ್ತರ ಮತ್ತು ಪೂರ್ವ ಭಾಗದ ಪ್ರದೇಶಗಳು ಈ ಮಂಡಲದಲ್ಲಿ ಅಂತರ್ಗತವಾಗಿದ್ದವು.

### ಕರಿಕಾಲ ಚೋಳ ವಳನಾಡು

ಚನ್ನಪಟ್ಟಣ ತಾಲ್ಲೂಕಿನ ಮಳೂರು ಗ್ರಾಮದ ಶಾಸನ(ಕ್ರಿ.ಶ. ಸು. ೧೦೦೦)ವೊಂದರಲ್ಲಿ ಪೆರಿಯಮಳವೂರು ಮುಡಿಗೊಂಡ ಚೋಳಮಂಡಲದ ಭಾಗವೆಂದು ಉಲ್ಲೇಖವಾಗಿದೆ.[56] ಇದು ಮುಡಿಗೊಂಡ ಚೋಳಮಂಡಲದ ಒಳ ವಿಭಾಗ (ಆದ್ದರಿಂದಲೇ ವಳನಾಡು ಎಂದು ಕರೆದಿರುವುದು). ಈ ವಳನಾಡಿನಲ್ಲಿ ಹಲವಾರು ನಾಡುಗಳು ಅಂತರ್ಗತವಾಗಿರುತ್ತವೆ. ಇವುಗಳಲ್ಲಿ ಕಿಳಲೈನಾಡು ಮುಖ್ಯವಾದುದೆನ್ನಬಹುದಾಗಿದೆ. ಈ ವಳನಾಡೇ ಮುಂದೆ ರಾಜೇಂದ್ರಚೋಳ ವಳನಾಡಾಗಿ ಪರಿವರ್ತಿತವಾದಂತೆ ತೋರುತ್ತದೆ.

### ಕ್ಷತ್ರಿಯ ಶಿಖಾಮಣಿ ವಳನಾಡು

ಚನ್ನಪಟ್ಟಣ ತಾಲ್ಲೂಕಿನ ಮಳೂರು ಗ್ರಾಮದ ಕ್ರಿ.ಶ. ೧೦೩೪ರ ಶಾಸನವೊಂದರಲ್ಲಿ ಪುಲಿಯೂರು ಕ್ಷತ್ರಿಯ ಶಿಖಾಮಣಿ ವಳನಾಡಿನಲ್ಲಿದ್ದ ಉಲ್ಲೇಖವಿದೆ.[57]

---

49. ಅದೇ, ಕಾನಕಾನಹಳ್ಳಿ ೨೩, ಕ್ರಿ. ಶ. ೧೧೫೦ ; ೨೬, ಕ್ರಿ. ಶ. ೧೯೯೦, ಚನ್ನಪಟ್ಟಣ ೧೬೭, ಇತ್ಯಾದಿ
50. ಅದೇ, ದೇವನಹಳ್ಳಿ ೭೫, ೭೬, ಕ್ರಿ. ಶ. ೧೦೫೦
51. ಅದೇ, ನೆಲಮಂಗಲ ೧
52. ಅದೇ, ೬೨
53. ಅದೇ, ಬೆಂಗಳೂರು ೬೬
54. ಅದೇ
55. ಅದೇ, ಹೊಸಕೋಟೆ ೭೫
56. ಅದೇ, ಚನ್ನಪಟ್ಟಣ ೯೨
57. ಅದೇ

ಇದು ಚೋಳಮಂಡಲಕ್ಕೆ ಸೇರಿದ್ದ ಭಾಗವೆಂದು ಇದೇ ಶಾಸನದಿಂದ ತಿಳಿದು ಬರುತ್ತದೆ. ಕಾಲಾಂತರದಲ್ಲಿ ಕರಿಕಾಲ ಚೋಳ ವಳನಾಡಿನಂತೆ ಈ ನಾಡೂ ರಾಜೇನ್ದ್ರ ಚೋಳ ವಳನಾಡಿನಲ್ಲಿ ಅಂತರ್ಗತವಾದಂತೆ ತೋರುತ್ತದೆ.

**ರಾಜರಾಜ ಚೋಳ ವಳನಾಡು**

ಕ್ರಿ. ಶ. ಸು. ೧೨೦೦ರ ದೊಮ್ಮಲೂರಿನ ಶಾಸನದಲ್ಲಿ 'ಇಲೈಪಾಕ್ಕನಾಡಿನ ತೊಂಬಲೂರು' ರಾಜರಾಜ ಚೋಳ ವಳನಾಡಿನ ಭಾಗವೆಂದು ಉಕ್ತವಾಗಿದೆ.[58] ಇದು ಕೂಡ ಚೋಳರ ಪ್ರಾರಂಭಕಾಲದ ಒಂದು ಒಳನಾಡು.

**ರಾಜೇನ್ದ್ರಚೋಳ ವಳನಾಡು**

ಇದು ಮುಡಿಗೊಣ್ಡ ಚೋಳಮಂಡಲದ ಒಂದು ಒಳನಾಡು. ಈ ನಾಡಿನಲ್ಲಿ ಕಿಟ್ಟಿಲೈನಾಡು, ಮೊರಸುನಾಡು, ಶಿಗಲ್‌ನಾಡು, ಎಲಹಕ್ಕನಾಡು ಇತ್ಯಾದಿ ನಾಡುಗಳು ಅಂತರ್ಗತವಾಗಿದ್ದವು. ಈ ಜಿಲ್ಲೆಯ ಚೋಳರ ಕಾಲದ ಶಾಸನಗಳಲ್ಲಿ ಮತ್ತು ಹೊಯ್ಸಳರ ಕಾಲದ ಶಾಸನಗಳಲ್ಲಿ ಹೆಚ್ಚಾಗಿ ಉಲ್ಲೇಖಗೊಂಡಿರುವ ಈ ನಾಡು ಬಹಳ ಪ್ರಸಿದ್ಧವಿದ್ದಂತೆ ತೋರುತ್ತದೆ.

**ಎರುಮರೈನಾಡು (ಯಮರೆ)**

ಈ ನಾಡಿನ ಉಲ್ಲೇಖಗಳು ಆನೇಕಲ್ಲು ತಾಲ್ಲೂಕಿನ ಕತ್ತರಿಕುಪ್ಪೆ ಮತ್ತು ಕೊಮ್ಮಸಂದ್ರ ಗ್ರಾಮಗಳ ಶಾಸನಗಳಲ್ಲಿ ಬಂದಿವೆ.[59] ಈ ನಾಡಿನ ಕೇಂದ್ರಸ್ಥಳ, ಶಾಸನಗಳಲ್ಲಿ 'ಎರುಮರೈ' ಎಂದು ಕರೆಯಲ್ಪಟ್ಟಿರುವ ಇದೇ ತಾಲ್ಲೂಕಿನ 'ಯಮರೆ' ಗ್ರಾಮವೇ ಆಗಿದೆ. 'ಎರುಮರೈ' ಎಂಬುದು 'ಯಮರೆ'ಯ ತಮಿಳು ರೂಪ. ಈ ನಾಡು ಮಾಶಂಡಿನಾಡಿನ ಒಂದು ಉಪ ವಿಭಾಗವೆನ್ನಲು ಇದೇ ಗ್ರಾಮದ ಕ್ರಿ. ಶ. ಸು. ೧೩೦೦ರ ಶಾಸನವೊಂದು ಆಧಾರವಾಗುತ್ತದೆ.[60] ಅನೇಕಲ್ಲು ತಾಲ್ಲೂಕಿನ ಉತ್ತರ ಭಾಗದಲ್ಲಿನ ಯಮರೆ, ಸರ್ಜಾಪುರ, ಕತ್ತರಿಕುಪ್ಪೆ, ಕೊಮ್ಮಸಂದ್ರಗಳನ್ನೊಳಗೊಂಡಂತೆ ಈ ನಾಡು ಇದ್ದಿತೆನ್ನಬಹುದು.

**ಎಲಹಕ್ಕನಾಡು (ಇಲೈಕಪಾಕ್ಕನಾಡು)**

ಬೆಂಗಳೂರು, ಹೊಸಕೋಟೆ, ದೊಡ್ಡಬಳ್ಳಾಪುರಮತ್ತು ದೇವನಹಳ್ಳಿ ತಾಲ್ಲೂಕುಗಳ ಶಾಸನಗಳಲ್ಲಿ ವಿಶೇಷವಾಗಿ ಪ್ರಸ್ತಾಪವಾಗಿರುವ ಈ ನಾಡಿಗೆ ಎಲಹಕ್ಕ, ಯಲಹಕ್ಕ, ಎಲಹಂಕ, ಎಲಹಕ್ಕ, ಯೆಲಹಕ, ಯಲಯಹಕ ಮುಂತಾದ ಕನ್ನಡ ರೂಪಗಳೂ ಇಲೈಪಾಕ್ಕನಾಡೆಂಬ ತಮಿಳು ರೂಪವೂ ಇದ್ದುದು ಗೊತ್ತಾಗುತ್ತದೆ. ಕ್ರಿ. ಶ. ೧೨೯೭ರ ದೊಮ್ಮಲೂರಿನ ಶಾಸನದಿಂದ ಇರುಂಬಲಿಯೂರು (< ಇಬ್ಬಲೂರು), ಶಯನಲ್ಲಾಯ್, ಕೊಪ್ಪಪುಳ್ಳಿ, ತೊಂಬಲೂರು (> ದೊಂಮಲೂರು), ಜಾಲಪ್ಪನಹಳ್ಳಿ, ವಿಣ್ಣಮಂಗಲ (< ಬಿನ್ನಮಂಗಲ) ಗ್ರಾಮಗಳು ಈ ನಾಡಿನಲ್ಲಿದ್ದವೆಂದೂ ತಿಳಿಯುತ್ತದೆ.[61] ಕ್ರಿ. ಶ. ೧೩೪೨ರ ಜಕ್ಕೂರು ಗ್ರಾಮದ ಶಾಸನದಿಂದ 'ಜಕ್ಕೂರು' ಈ ನಾಡಿನಲ್ಲಿದ್ದಿತೆಂದು ತಿಳಿದುಬರುತ್ತದೆ.[62] ಶಿಂಗಿನಾಯ್ಕನಹಳ್ಳಿಯ ಕ್ರಿ. ಶ. ೧೩೦೫ರ ಶಾಸನದಲ್ಲಿ ಗಂಗನಾರಾಯಣ ಚತುರ್ವೇದಿ ಮಂಗಲವು ಈ ನಾಡಿನಲ್ಲೇ ಅಂತರ್ಗತವಾಗಿದ್ದಿತೆಂಬ ಅಂಶ ವ್ಯಕ್ತವಾಗುತ್ತದೆ.[63] ಕ್ರಿ. ಶ. ೧೩೪೭ರ ಕಾಣಿಗರಹಳ್ಳಿ ಶಾಸನದಲ್ಲಿ ಸೋಮದೇವನಹಳ್ಳಿ, ಕಾಳಿತಮ್ಮನಹಳ್ಳಿಗಳು ಈ ನಾಡಿನ ಗ್ರಾಮ

---

58. ಅದೇ, ಬೆಂಗಳೂರು ೧೩
59. ಅದೇ, ಆನೇಕಲ್ಲು ೨೮, ೩೦ ಮತ್ತು ೩೧
60. ಅದೇ, ೩೪
61. ಅದೇ, ಬೆಂಗಳೂರು ೬ ಎ
62. ಅದೇ, ೨೧
63. ಅದೇ, ೨೩

ಗಳೆಂದು ವರ್ಣಿತವಾಗಿವೆ.[64] ಅಲ್ಲಾಳಸಂದ್ರ (ಕ್ರಿ. ಶ. ೧೩೪೦), ನಾಗಸಂದ್ರ (ಕ್ರಿ. ಶ. ೧೩೪೨), ಹೆಬ್ಬಾಳ (ಕ್ರಿ. ಶ. ೧೩೦೮), ಹೊಸಕೋಟೆ ತಾಲ್ಲೂಕಿನ ಬಯಿರತ್ತಿ (ಕ್ರಿ. ಶ. ೧೩೩೦), ದೊಡ್ಡಬಳ್ಳಾಪುರ ತಾಲ್ಲೂಕಿನ ಹಾಡೋಹಳ್ಳಿ, ಕುರಿವಿಗೆರೆ, ದೊಡ್ಡಬಳ್ಳಾಪುರ, ತಿಂಡಲು ಮತ್ತು ದೇವನಹಳ್ಳಿ, ತಾಲ್ಲೂಕಿನ ಜಾಲಿಗೆ, ಯಂಬ್ರಳ್ಳಿ, ಸುರಧೇನುಪುರ, ಸಾದೇನಹಳ್ಳಿ, ಕೊಡಿಗೆಹಳ್ಳಿ, ಕುದಿರ್ಕ್ಕಿಟಿ[3], ಜಾಲ, ಬನಹಳ್ಳಿ, ಗಂಗವಾರ, ಕಟಿಗೇನಹಳ್ಳಿ, ಬಯನಹಳ್ಳಿ, ಕಾಡಿಗೇನಹಳ್ಳಿ, ಚಿಕ್ಕಜಾಲ, ಬಂಡೆ ಕೊಡಿಗೆಹಳ್ಳಿ ಮೊದಲಾದ ಊರುಗಳಲ್ಲಿ ಎಲಹಕ್ಕ ನಾಡನ್ನು ಉಲ್ಲೇಖಿಸುವ ಶಾಸನಗಳಿವೆ. ಈ ನಾಡು ರಾಜೇನ್ದ್ರಚೋಳ ವಳನಾಡಿನ ಭಾಗವಾಗಿತ್ತು ಎಂಬ ಅಂಶವು ದೊಮ್ಮಲೂರಿನ ಕ್ರಿ.ಶ. ೧೨೬೬ರ ಶಾಸನದಿಂದ ತಿಳಿಯುತ್ತದೆ.[65] ಅಲ್ಲದೆ ರಾಜೇನ್ದ್ರಚೋಳ ವಳನಾಡು ನಿಗರಿಲಿ ಚೋಳಮಂಡಲದ ಭಾಗವೆಂದು ಮಡಿವಾಳ ಗ್ರಾಮದ ಕ್ರಿ.ಶ. ೧೩೬೫ರ ಶಾಸನದಿಂದ ವಿದಿತವಾಗುತ್ತದೆ.[66] ಮಧ್ಯಕಾಲೀನ ಬೆಂಗಳೂರು ಜಿಲ್ಲೆಯ ಇತಿಹಾಸದಲ್ಲಿ ಈ ನಾಡು ಪ್ರಭಾವಶಾಲಿಯಾದ ಆಡಳಿತ ವಿಭಾಗವಾಗಿದ್ದಿತೆಂಬ ಅಂಶಕ್ಕೆ ಶಾಸನಗಳಲ್ಲಿ ಯಥೇಚ್ಛವಾಗಿ ಕಂಡು ಬಂದಿರುವ ಉಲ್ಲೇಖಗಳೇ ಸಾಕ್ಷಿಯೆನ್ನಬಹುದು. ಈ ನಾಡಿನ ಕೇಂದ್ರ ಸ್ಥಳ ಬೆಂಗಳೂರಿನ ಉತ್ತರಕ್ಕಿರುವ ಈಗಿನ ಯಲಹಂಕವೇ ಆಗಿದೆ. ಇದು ವಿಜಯನಗರ ಕಾಲದಲ್ಲಿ ಕೆಂಪೇಗೌಡನ ವಂಶಿಕರಾದ ಸ್ಥಳೀಯ ಪಾಳೆಯಗಾರರ ರಾಜಧಾನಿಯಾಗಿದ್ದಿತು. ಇಂದಿನ ಬೆಂಗಳೂರು ತಾಲ್ಲೂಕುಗಳ ಪೂರ್ವಭಾಗ, ಹೊಸಕೋಟೆ ತಾಲ್ಲೂಕಿನ ಪಶ್ಚಿಮಭಾಗ, ಸ್ವಲ್ಪ ಹೆಚ್ಚು ಕಡಿಮೆ ದೊಡ್ಡಬಳ್ಳಾಪುರ ಮತ್ತು ದೇವನಹಳ್ಳಿ ತಾಲ್ಲೂಕುಗಳನ್ನೊಳಗೊಂಡಂಥ ಒಂದು ದೊಡ್ಡ ನಾಡು ಇದಾಗಿದ್ದಿತು.

## ಕಿಟಿಲ್ಯೆನಾಡು

ಈ ನಾಡಿನ ಪ್ರಾಚೀನ ರೂಪ ಕ್ರಿ.ಶ. ಸು. ೭೫೦ರ ಚನ್ನಪಟ್ಟಣ ತಾಲ್ಲೂಕಿನ ಐಜೂರು ಶಾಸನದಲ್ಲಿ ಉಕ್ತವಾಗಿರುವ ಕೆಳ್ಗಲಿನಾಡು ಎಂಬುದೇ ಆಗಿರಬೇಕೆಂದು ತೋರುತ್ತದೆ. (ನೋಡಿ : ಕೆಳ್ಗಲಿನಾಡು). ಕ್ರಿ.ಶ. ೧೦೧೮ರ ಹೊಂಗನೂರಿನ ಶಾಸನದಲ್ಲಿ ಮುಡಿಗೊಂಡ ಚೋಳಮಂಡಲದ ಭಾಗವಾಗಿ ಪುಂಗನೂರು ( > ಹೊಂಗನೂರು) ಇದ್ದ ಬಗ್ಗೆ ತಿಳಿಸುತ್ತದೆ.[67] ಕ್ರಿ.ಶ. ೧೦೮೬ರ ಮಳೂರು ಶಾಸನದಲ್ಲಿ 'ಪೆರಿಯಮಟಿವೂರು' ಕಿಟಿಲ್ಯೆನಾಡಿನ ಭಾಗವೆಂದೂ ಈ ನಾಡು ರಾಜೇನ್ದ್ರಚೋಳ ವಳನಾಡಿನಲ್ಲಿ ಅಂತರ್ಗತವಾಗಿದ್ದಿತೆಂದೂ ಮತ್ತು ಪೆರಿಯಮಟಿವೂರಿಗೆ ರಾಜೇನ್ದ್ರಸಿಂಹ ಚತುರ್ವೇದಿ ಮಂಗಲವೆಂಬ ಪರ್ಯಾಯ ನಾಮವಿದ್ದಿತೆಂದೂ ತಿಳಿಯುತ್ತದೆ.[68] ಅಲ್ಲದೆ, ಮಳೂರಿನ ಒಂದು ಭಾಗಕ್ಕೆ ನಿಗರಿಲಿ ಚೋಳಪುರವೆಂಬ ಹೆಸರಿದ್ದ ಬಗ್ಗೆ ಕ್ರಿ.ಶ. ೧೧೯೫ರ ಮಳೂರು ಪಟ್ಟಣದ ಶಾಸನದಿಂದ ತಿಳಿದು ಬರುತ್ತದೆ.[69] ಕ್ರಿ.ಶ. ೧೩೦೭ ಮತ್ತು ಕ್ರಿ.ಶ. ೧೩೨೬ರ ಮಳೂರಿನ ಕನ್ನಡ ಶಾಸನಗಳಲ್ಲಿ 'ಅನಾದಿ ಅಗ್ರಹಾರಂ ರಾಜೇನ್ದ್ರಸಿಂಹ ಚತುರ್ವೇದಿ ಮಂಗಲ' ಎಂಬ ಉಲ್ಲೇಖಗಳು ದೊರೆಯುತ್ತವೆ.[70] ಈ ನಾಡಿನಲ್ಲಿ ಸಮಾವೇಶಗೊಂಡಿದ್ದ ಶಾಸನೋಕ್ತ ಗ್ರಾಮಗಳು ಯಾವುವೆಂದರೆ : ಮಳವೂರು > ರಾಜೇನ್ದ್ರಸಿಂಹ ಚತುರ್ವೇದಿಮಂಗಲ, ಪುಂಗನೂರು > ತ್ರೈಲೋಕ್ಯದೇವಿ ಚತುರ್ವೇದಿಮಂಗಲ, ಕೂಡಲೂರು > ರಾಜರಾಜ ಚತುರ್ವೇದಿ ಮಂಗಲ, ವೆಪ್ಪೂರ್ > ವೆಂಗೇಶ್ವರ ಕುಲಕಾಲನಲ್ಲೂರ್, ಕಟಿಕೂರು ಕಡಬ > ಶ್ರೀ ಕೇಶವ ಚತುರ್ವೇದಿ ಮಂಗಲ, ಕಂದಮಂಗಲ > ಕರುದಿಮಂಗಲ > ಕಂನಮಂಗಲ, ಸಾರಘಟ್ಟ, ಕಿಬ್ಬೆಜೇಯಗ ವುಡನಹಳ್ಳಿ, ಚಿಕ್ಕಗಂಗವಾಡಿ, ಪೆರುತಿಕೋಟ್ಟೈ, ಎಲಚವಾಡಿ, ಕುಣಮಂಗಲ, ಅಟಿಕಿಟಿ[3]- ಈ

---

64. ಅದೇ, ೨೪
65. ಅದೇ, ೧೦
66. ಅದೇ, ೬೭
67. ಅದೇ, ಚನ್ನಪಟ್ಟಣ ೪೨
68. ಅದೇ, ೭೭
69. ಅದೇ, ೧೩೭
70. ಅದೇ, ೭೬ ಮತ್ತು ೯೮

ಗ್ರಾಮಗಳೆಲ್ಲವೂ ಬಹುಮಟ್ಟಿಗೆ ಇಂದಿನ ರಾಮನಗರ ಮತ್ತು ಚನ್ನಪಟ್ಟಣ ತಾಲ್ಲೂಕುಗಳ ಪ್ರದೇಶದಲ್ಲಿ ಅಂತರ್ಗತವಾಗಿವೆ. 'ಕಿಳಲೆನಾಡು' ಎಂಬ ಪ್ರಯೋಗವು ಈ ನಾಡಿಗೆ ಇದ್ದಿತು.

**ಕುಂಜಿನಾಡು**

ಹೊಸಕೋಟೆ ತಾಲ್ಲೂಕಿನ ನಿಡುಘಟ್ಟ ಗ್ರಾಮದ ಶಾಸನದಲ್ಲಿ 'ಕುಂಜಿನಾಡಾನ್ ಪುಲ್ಲಿಯೂರ್ ನಾಟ್ಟು' ಎಂದಿದೆ. ಇದರಿಂದ ವ್ಯಕ್ತವಾಗುವ ಅಂಶವೆಂದರೆ ಪುಲ್ಲಿಯೂರು ನಾಡಿನ ಹಿಂದಿನ ಹೆಸರು 'ಕುಂಜಿನಾಡು' ಎಂಬುದು. ಇದು ನಿಗರಿಲಿ ಚೋಳಮಂಡಲದ ಭಾಗ. ಮುಗುಳಬಾಳ ಗ್ರಾಮದ ಶಾಸನದಲ್ಲಿ 'ತಿರುಕ್ಕುಂಜಿ ನಾಟ್ಟು' ಎಂಬ ಪ್ರಯೋಗವಿದ್ದು 'ತಿರುಮಯಿಉಪ್ಪೂರ್' ಎಂಬ ಗ್ರಾಮವೊಂದು ಹೆಸರಿಸಲ್ಪಟ್ಟಿದೆ. 71

**ಚಿಕ್ಕಗಂಗವಾಡಿನಾಡು**

ಹೊಯ್ಸಳ ವೀರನಾರಸಿಂಹನ ಕ್ರಿ. ಶ. ೧೨೭೮ರ ಚನ್ನಪಟ್ಟಣ ತಾಲ್ಲೂಕಿನ ಯಲಿಯೂರು ಗ್ರಾಮದ ಶಾಸನದಲ್ಲಿ 'ದೇವದಾನದ ಯಲೆಯೂರು' ಚಿಕ್ಕ ಗಂಗವಾಡಿ ನಾಡಿನಲ್ಲಿದ್ದ ಬಗ್ಗೆ ಉಲ್ಲೇಖಿಸುತ್ತದೆ.72 ಕನಕಪುರ ತಾಲ್ಲೂಕಿನ ಹಲ್ಲೂರು ಶಾಸನ(ಕ್ರಿ. ಶ. ೧೨೭೭)ದಲ್ಲಿ ಮದ್ದೂರು>ಶ್ರೀನಾರಸಿಂಹ ಚತುರ್ವೇದಿ ಮಂಗಲ, ಸಿವಪುರ, ಹಲುಗೂರು (>ಹಲ್ಲೂರು), ಬೋಡರಹಳ್ಳಿ ಗ್ರಾಮಗಳು ಉಕ್ತವಾಗಿವೆ. 73 ನಿಟ್ಟೂರು ಗ್ರಾಮದ ಕ್ರಿ. ಶ. ೧೯೯೯ರ ಹೊಯ್ಸಳ ವೀರಬಲ್ಲಾಳದೇವನ ಶಾಸನದಲ್ಲಿ 'ಚಿಕ್ಕಗಂಗವಾಡಿ ನಾಡೊಳಗಣ ರೆಳವಲೆನಾಡ ನಿಟ್ಟೂರ ಮಂಡಲ ಸ್ವಾಮಿಯರ ಮಗ....' ಎಂಬ ಉಲ್ಲೇಖವಿದೆಯಲ್ಲದೆ, 74 ಈ ನಾಡಿನಲ್ಲಿ ನಿಟ್ಟೂರಹಳ್ಳಿ, ಹರನೂರ ಗ್ರಾಮಗಳು ಅಂತರ್ಗತವಾಗಿದ್ದವು. ಈ ಶಾಸನದಲ್ಲಿ ಪ್ರಯುಕ್ತವಾಗಿರುವ 'ರೆಳವಲೆನಾಡು' ಯಾವುದು ಎಂಬ ಪ್ರಶ್ನೆ ಏಳುತ್ತದೆ. ವಾಸ್ತವವಾಗಿ ಇದು ಕಿಳಲೆ ನಾಡೇ ಆಗಿರಬೇಕು. ಏಕೆಂದರೆ, ಇದೇ ಊರಿನಲ್ಲಿರುವ ಕ್ರಿ. ಶ. ೧೨೮೩ರ ಹೊಯ್ಸಳ ವೀರ ನಾರಸಿಂಗದೇವನ ಶಾಸನದಲ್ಲಿ 'ಶ್ರೀಮತು ಚಿಕ್ಕಗಂಗವಾಡಿಯಾದ ಕಿಳಲೆನಾಡ ನಿಟ್ಟೂರ' ಎಂಬ ಉಲ್ಲೇಖವಿದೆ.75 ಅಲ್ಲದೆ, ಈ ಉಲ್ಲೇಖ, ಕಿಳಲೆನಾಡೇ ಚಿಕ್ಕಗಂಗವಾಡಿ ಆಯಿತೇ ಎಂಬ ಸಂದೇಹವನ್ನು ಉಂಟುಮಾಡುತ್ತದೆ.

**ತುರ್ಯೈವಟಿನಾಡು**

ಹೊಯ್ಸಳ ವೀರಬಲ್ಲಾಳನ ಕಾಲದ (ಕ್ರಿ. ಶ. ೧೩೩೪) ಬೆಂಗಳೂರು ಜಿಲ್ಲೆಯ ಇಮ್ಮಡಹಳ್ಳಿಯ ಶಾಸನವು ಪಮ್ಮಸಂದ್ರ, ಪಮ್ಮಕಿಜ್ಜಿ, ನಾಗ ಗಲುಂಡಪಳ್ಳಿಗಳು ತುಜ್ಜೈವಜಿನಾಡಿನಲ್ಲಿದ್ದ ಬಗ್ಗೆ ತಿಳಿಸುತ್ತದೆ.76 ಸಾದರಮಂಗಲದ ಕ್ರಿ.ಶ. ೧೩೩೭ರ ಶಾಸನದಲ್ಲಿ 'ತುಜ್ಜೈವಜಿನಾಟ್ಟು' ಎಂಬ ಉಲ್ಲೇಖವಿದೆ. ಕ್ರಿ. ಶ. ೧೩೩೨ರ ಹೂಡಿಗ್ರಾಮದ ಶಾಸನದಲ್ಲಿ 'ತೊಜಿವಟಿಯನಾಡ ತೊಳವಂಡಿಯ ಚಿಕ್ಕಹೂಡಿ' ಎಂಬ ಉಲ್ಲೇಖವಿದೆ. 77 ಹೊಸಕೋಟೆ ತಾಲ್ಲೂಕಿನ ಸತ್ಯವಾರ (ಕ್ರಿ. ಶ. ೧೩೩೨) ಮತ್ತು ಮುಗಳಬಾಳ ಗ್ರಾಮಗಳ ಶಾಸನಗಳಲ್ಲಿ 'ತುಜುವರೆ' ಎಂಬ ಉಲ್ಲೇಖವಿದೆ.78 ತುರ್ಯೈವಟಿನಾಡೆಂಬುದು

71. ಅದೇ, ಹೊಸಕೋಟೆ ೭೫
72. ಅದೇ, ಚನ್ನಪಟ್ಟಣ ೬೫
73. ಅದೇ, ಕಾನಕಾನಹಳ್ಳಿ ೭೨
74. ಅದೇ, ೭೬
75. ಅದೇ, ೮೨
76. ಅದೇ, ಬೆಂಗಳೂರು ೪೪
77. ಅದೇ, ೬೦ ಮತ್ತು ೬೧
78. ಅದೇ, ಹೊಸಕೋಟೆ ೧೦೪ ಮತ್ತು ೯೯

ಬೆಂಗಳೂರು ನಗರದ ಪೂರ್ವಭಾಗಕ್ಕೆ ಇರುವ ಸಾದರ ಮಂಗಲ, ಇಂಮಡಿಹಳ್ಳಿ, ಹೂಡಿ, ಕಾಡುಗೋಡಿ, ಪಟ್ಟಂದೂರು ಮುಂತಾದ ಊರುಗಳನ್ನೊಳಗೊಂಡ ಪ್ರದೇಶವೆಂದು ನಿರ್ಧರಿಸಬಹುದಾಗಿದೆ. ಈ ನಾಡಿನ ಉತ್ತರಕ್ಕೆ ಸಣ್ಣೆನಾಡು ಇದ್ದ ಬಗ್ಗೆ ಕ್ರಿ. ಶ. ೧೩೪೩ರ ಪಟ್ಟಂದೂರು ಶಾಸನ ಆಧಾರ ನೀಡುತ್ತದೆ.[79] ಅಲ್ಲದೆ, ಕಾಡುಗೋಡಿ, ಹಟಂದೂರು ಸ್ಥಳಗಳು ತುಱೈವಟಿನಾಡಿನ ಹಳ್ಳಿಗಳೇ ಆಗಿವೆ.

### ಪುಲ್ಲಿಯೂರುನಾಡು

ಹೊಸಕೋಟೆ ತಾಲ್ಲೂಕಿನ ಚಿಕ್ಕನಲ್ಲೂರು, ನಿಡುಘಟ್ಟ, ಚೋಳಪ್ಪನಹಳ್ಳಿ, ಮುಗಬಾಳ (ಕ್ರಿ.ಶ. ೧೩೩೭), ಅಟ್ಟೂರು (ಕ್ರಿ. ಶ. ೧೩೪೨), ಸತ್ಯವಾರ (ಕ್ರಿ. ಶ. ೧೩೩೨) ಗ್ರಾಮಗಳ ಶಾಸನಗಳಲ್ಲಿ[80] ಪ್ರಸ್ತಾಪವಾಗಿರುವ ಈ ನಾಡಿನಲ್ಲಿ ನಲ್ಲೂರಪಳ್ಳಿ, ವಡಕರುಪಳ್ಳಿ, ತೋಳಪ್ಪನ್ಪಳ್ಳಿ (ಚೋಳಪ್ಪನಹಳ್ಳಿ) ಗ್ರಾಮಗಳು ಸಮಾವೇಶಗೊಂಡಿದ್ದವು. ಈ ನಾಡು ನಿಗರಿಲಿ ಚೋಳಮಂಡಲದ ಭಾಗ.

### ಪೆರಿಯನಾಡು

ಆನೇಕಲ್ಲು ತಾಲ್ಲೂಕಿನ ಇಗ್ಗಲೂರು (ಕ್ರಿ. ಶ. ೧೩೩೦),[81] ಬನ್ನೇರುಘಟ್ಟ (ಕ್ರಿ. ಶ. ೧೨೯೭)[82] ಗ್ರಾಮಗಳ ಶಾಸನಗಳಲ್ಲಿ ಉಲ್ಲೇಖಿಗೊಂಡಿರುವ ಈ ನಾಡು 'ಪೊಣ್ಮಣಿಗನಾಡಿನ' ಒಂದು ಉಪ ವಿಭಾಗವಾಗಿದ್ದ ಬಗ್ಗೆ (ಬನ್ನೇರುಘಟ್ಟ ಗ್ರಾಮದ) ಶಾಸನವೊಂದು ಆಧಾರ ನೀಡುತ್ತದೆ. ಈ ಆಡಳಿತ ವಿಭಾಗದ ಉಲ್ಲೇಖಗಳು ಅತ್ಯಲ್ಪ. ಬನ್ನೇರುಘಟ್ಟದ ಸುತ್ತಮುತ್ತಲ ಪ್ರದೇಶ ಈ ನಾಡಿನಲ್ಲಿ ಅಂತರ್ಗತವಾಗಿದ್ದಿತೆನ್ನಬಹುದು.

### ಬಾಣತಿಹಳ್ಳಿಯನಾಡು

ಚನ್ನಪಟ್ಟಣ ತಾಲ್ಲೂಕಿನ ಯಲಿಯೂರು ಗ್ರಾಮದ ಕ್ರಿ. ಶ. ೧೨೭೮ರ ಶಾಸನವೊಂದರಲ್ಲಿ ಈ ನಾಡಿನ ಪ್ರಸ್ತಾಪವಿದ್ದು, ದೇವದಾನದ ಯಲೆಯೂರು, ಪಟ್ಟ, ಬಾಣರತ್ತಹಳ್ಳಿಗಳು ಶಾಸನೋಕ್ತವಾಗಿವೆ.[83] ಪ್ರಾಯಶಃ ಇದು ಒಂದು ಉಪ ನಾಡಾಗಿದ್ದು ಚಿಕ್ಕಗಂಗವಾಡಿನಾಡು ಮತ್ತು ಕಿಳಲೆನಾಡುಗಳಲ್ಲಿ ಅಂತರ್ಗತವಾಗಿದ್ದಂತೆ ತೋರುತ್ತದೆ.

### ಮಾಶಂಡಿನಾಡು

ಇದು ಚೋಳರ ಕಾಲದ ಒಂದು ಪ್ರಸಿದ್ಧ ನಾಡು. ಆನೇಕಲ್ಲು ತಾಲ್ಲೂಕಿನ ಯಮರೆ ಗ್ರಾಮದ ಶಾಸನದಲ್ಲಿ ಪ್ರಸ್ತಾಪಗೊಂಡಿರುವ ಈ ನಾಡು ಆನೇಕಲ್ಲು ತಾಲ್ಲೂಕಿನ ಉತ್ತರಭಾಗವೂ ಸೇರಿದಂತೆ, ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕು,ಧರ್ಮಪುರಿ ಜಿಲ್ಲೆಯ ಹೊಸೂರು ತಾಲ್ಲೂಕಿನ ಉತ್ತರಭಾಗದ ಪ್ರದೇಶಗಳನ್ನು ಈ ನಾಡು ಒಳಗೊಂಡಿದ್ದಿತೆಂದು ಶಾಸನಗಳಿಂದ ತಿಳಿದುಬರುತ್ತದೆ.[84]

### ವೆಪ್ಪೂರುನಾಡು

(ನೋಡಿ: ಬೆಂಪೂರು ಪನ್ನೆರಡು). ಗಂಗರ ಕಾಲದಲ್ಲಿ ಬೆಂಪೂರು-೧೨ ಎಂಬ ಹೆಸರಿನಿಂದ ಕರೆಯಲಾಗಿದ್ದ ಒಂದು ಪ್ರಾದೇಶಿಕ ವಿಭಾಗವೇ ಮುಂದೆ, ಚೋಳರ ಮತ್ತು ಹೊಯ್ಸಳರ ಕಾಲದ ಶಾಸನಗಳಲ್ಲಿ ವೆಪ್ಪೂರುನಾಡು ಎಂದು ಹೆಸರಾಗಿದೆ. ಕ್ರಿ. ಶ. ೧೨೪೭ರ ಮಡಿವಾಳ ಗ್ರಾಮದ ಶಾಸನದಲ್ಲಿ ಈ ನಾಡಿನ ಉಲ್ಲೇಖ ಬಂದಿದೆ.[85] ವೆಪ್ಪೂರ್ (ಬೇಗೂರು), ಬೆಂಗುಳೂರು (ಬೆಂಗಳೂರು), ಕೂಡಲ್ (ಕೂಡ್ಲು) ಊರುಗಳು ಶಾಸ

79. ಅದೇ, ಬೆಂಗಳೂರು ೪೧
80. ಅದೇ, ಹೊಸಕೋಟೆ ೭೫, ೯೩, ೯೯, ೯೦ ಮತ್ತು ೧೦೪
81. ಅದೇ, ಆನೇಕಲ್ಲು ೬೨
82. ಅದೇ, ೮೪
83. ಅದೇ, ಚನ್ನಪಟ್ಟಣ ೬೫
84. ಆನ್ಯುಯಲ್ ರಿಪೋರ್ಟ್ ಆನ್ ಇಂಡಿಯನ್ ಎಪಿಗ್ರಫಿ, ೧೯೬೯-೭೦ : ಶಾಸನ ಬಿ ೨೫೭ (ಪು. ೪೮) ಮತ್ತು ಬಿ ೨೮೭ (ಪು. ೫೧), ಕ್ರಿ. ಶ. ೧೨೯೫
85. ಎ. ಕ., ೯, ಬೆಂಗಳೂರು ೬೮

ನೋಕ್ತವಾಗಿವೆ. ಕ್ರಿ. ಶ. ೧೩೩೦ರ ಆನೇಕಲ್ಲು ತಾಲ್ಲೂಕಿನ ಹೀಲಲಿಗೆ ಗ್ರಾಮದ ಶಾಸನದಲ್ಲಿ '....ಲ ಪಟ್ಟಣವು ವೆಪ್ಪೂರು ನಾಡಿನಲ್ಲಿದೆ' ಎಂಬ ಉಲ್ಲೇಖವಿದೆ.[86] ಮಡಿವಾಳ ಗ್ರಾಮದ ಇನ್ನೊಂದು ಶಾಸನದಲ್ಲಿ (ಕ್ರಿ. ಶ. ೧೩೭೫) 'ತಾಮರೈಕ್ಕೆೞ್ಯಿ' (ತಾವರೆಕೆರೆ) ವೆಪ್ಪೂರು ನಾಡಿನ ಗ್ರಾಮವೆಂದು ತಿಳಿಯುತ್ತದೆ.[87] ಬೆಂಗಳೂರು ನಗರದ ಆಗ್ನೇಯ ಭಾಗವೂ ಸೇರಿದಂತೆ ಬೆಂಗಳೂರು ದಕ್ಷಿಣ ಮತ್ತು ಆನೇಕಲ್ಲು ತಾಲ್ಲೂಕಿನ ಹಲವಾರು ಗ್ರಾಮಗಳು ಈ ನಾಡಿನಲ್ಲಿ ಅಂತರ್ಗತವಾಗಿದ್ದವು. ಅಂದರೆ, ಸರಿ ಸುಮಾರು ಗಂಗರ ಕಾಲದ ಬೆಂಪೂರು ಪನ್ನೆರಡರಷ್ಟೆ ಪ್ರದೇಶವನ್ನು ಇದು ಒಳಗೊಂಡಿದ್ದಿತೆನ್ನಬಹುದು.

### ವೆಯೂರುನಾಡು

ಬೆಂಗಳೂರು ದಕ್ಷಿಣ ತಾಲ್ಲೂಕಿನ ದೊಡ್ಡಕನ್ನೆಲ್ಲಿ ಗ್ರಾಮದ ಕ್ರಿ.ಶ. ೧೩೪೭ರ ಶಾಸನವೊಂದರಲ್ಲಿ ಇರುಂಬಿಲಿಯೂರು (ಇಬ್ಬಲೂರು) ಮತ್ತು ಉದೈಯನಪಳ್ಳಿಗಳು ವೆಯೂರುನಾಡಿನ ಗ್ರಾಮಗಳೆಂದು ಉಲ್ಲೇಖಿಸಲ್ಪಟ್ಟಿದೆ.[88]

### ಶಿಗಲ್‌ನಾಡು ಅಥವಾ ಶಿಯಲ್‌ನಾಡು

(ಸಿಗಲನಾಡು) ಕನಕಪುರ ತಾಲ್ಲೂಕಿನ ಬಾಳೇಪುರ ಶಾಸನ (ಕ್ರಿ. ಶ. ೧೧೫೦), ಹೊಸದುರ್ಗ (ಕ್ರಿ. ಶ. ೧೩೨೦), ಚಿಕ್ಕಕೊಪ್ಪ (ಕ್ರಿ. ಶ. ೧೩೩೭), ಆಲಹಳ್ಳಿ (ಕ್ರಿ.ಶ. ೧೧೭೮), ಮುಳ್ಳಹಳ್ಳಿ (ಕ್ರಿ. ಶ. ೧೩೦೦ ಮತ್ತು ಕ್ರಿ. ಶ. ೧೨೦೭), ತುಂಗಣಿ (ಕ್ರಿ. ಶ. ೧೩೧೬) ಮತ್ತು ಚನ್ನಪಟ್ಟಣ ತಾಲ್ಲೂಕಿನ ಎಡಮಾರನಹಳ್ಳಿ ಶಾಸನಗಳಲ್ಲಿ ಈ ನಾಡಿನ ಉಲ್ಲೇಖ ಬಂದಿದೆ. ಈ ನಾಡನ್ನು 'ಸಿಗಲನಾಡು' ಎಂದು ಕನ್ನಡ ಶಾಸನಗಳಲ್ಲೂ[89] 'ಚಿಗಲ್ ನಾಟ್ಟು', 'ಶಿಯಲ್‌ನಾಟ್ಟು' ಎಂದು ತಮಿಳು ಶಾಸನಗಳಲ್ಲೂ[90] ಕರೆಯಲಾಗಿದೆ. ಈ ನಾಡಿನಲ್ಲಿ ಅಂತರ್ಗತವಾಗಿದ್ದ ಶಾಸನೋಕ್ತ ಗ್ರಾಮಗಳೆಂದರೆ : ಅಣ್ಣೈಯನ್‌ಪಳ್ಳಿ, ಮುಕ್ಕೂಡಲ್ ವಡಕೂಱು, ಅಣಿಲೈವಾಡಿ (ಅಣಿಲೆವಾಡಿ), ವಿಣ್ಣೂರುಕೊಟ್ಟೈ, ಅಲೆಂಬಳ್ಳಿ, ಮಾರೇನಹಳ್ಳಿ, ಅಗರ, ಹಂನೆರಡುಂಬೂರು, ನಾಕಪಪಳ್ಳಿ, ಬನಹಳ್ಳಿ, ಮಾರಳ್ಳಿ, ದಿನ್ನೂರು, ಮುಳ್ಳೈಪಳ್ಳಿ, ತೊರಗನೂರು, ಯೊಣ್ಡಿಗಪಳ್ಳಿ, ಅರುಳಹಳ್ಳಿ, ವನ್ನಿಗಹಳ್ಳಿ, ವಡದಂಗಾಲೂರು, ತುಂಗಣಿ, ಇತ್ಯಾದಿ. ಕನಕಪುರ ತಾಲ್ಲೂಕಿನ ಚಿಕ್ಕಕೊಪ್ಪ ಶಾಸನ (ಕ್ರಿ.ಶ. ೧೩೩೭)ದಲ್ಲಿ '(ಸಿಗ)ಲನಾಡ ಸಾವಿರಮುಂ' ಎಂಬ ತ್ರುಟಿತ ಉಲ್ಲೇಖವಿದೆ.[91] ಇದರಿಂದ ಶಿಗಲ್‌ನಾಡೆಂಬುದು ಸಾಂಪ್ರದಾಯಿಕವಾಗಿ ಸಾವಿರ ಗ್ರಾಮಗಳನ್ನೊಳಗೊಂಡಂಥ ಒಂದು ಆಡಳಿತ ವಿಭಾಗವಿದ್ದಿರಬೇಕೆಂದು ತೋರುತ್ತದೆ. ಈ ನಾಡು ಮುಡಿಗೊಂಡ ಚೋಳಮಂಡಲದ ರಾಜೇನ್ದ್ರಚೋಳ ವಳನಾಡಿನ ಭಾಗವೆಂದು ಅನೇಕ ಶಾಸನಗಳಿಂದ ವ್ಯಕ್ತವಾಗುತ್ತದೆ.

### ಸಾವಿತೆಯನಾಡು

ಆನೇಕಲ್ಲು ತಾಲ್ಲೂಕಿನ ಗೆರಟಿಗನಬೆಲೆಯ ಕ್ರಿ.ಶ. ೧೩೨೫ರ ಶಾಸನವೊಂದರಲ್ಲಿ 'ಸಾವಿತೆಯ ನಾಡಿನ ಗೆರಟಿನಬೆಲೆ' ಎಂಬ ಉಲ್ಲೇಖವಿದೆ.[92]

### ಹೊಮ್ಮಳಿಗೆನಾಡು

ಕ್ರಿ.ಶ. ೧೩೧೭ರ ಹೊಯ್ಸಳರ ಶಾಸನವೊಂದರಲ್ಲಿ[93] ಈ ನಾಡಿನ ಉಲ್ಲೇಖವಿದೆ. (ಕನಕಪುರ ತಾಲ್ಲೂಕಿನ ಗಾಣಾಳುಕೊಪ್ಪ) ಕನಕಪುರ ತಾಲ್ಲೂಕಿನ ಹಳೇ ಅಗ್ರಹಾರದ ಶಾಸನದಲ್ಲಿ (ಕ್ರಿ.ಶ. ೧೪೦೭)

---

86. ಅದೇ, ಆನೇಕಲ್ಲು ೬೫
87. ಅದೇ, ಬೆಂಗಳೂರು ೬೭
88. ಅದೇ, ೪೭
89. ಅದೇ, ಕಾನಕಾನಹಳ್ಳಿ ೩೦, ೪೧ ಮತ್ತು ೧೦೪
90. ಅದೇ, ೨೩, ೨೪, ೩೫, ೪೩
91. ಅದೇ, ೩೦
92. ಅದೇ, ಆನೇಕಲ್ಲು ೫೬

'ವೊಂಮಳಿಗೆನಾಡು' ಎಂದೂ ಚಿಕ್ಕಮರಳವಾಡಿ ಗ್ರಾಮದ ಶಾಸನದಲ್ಲಿ 'ಹೊಂಮಳಿಗೆಯ ನಾಡು...' ಎಂದೂ ಉಲ್ಲೇಖಗಳಿವೆ. ಕನಕಪುರ ತಾಲ್ಲೂಕಿನ ಗಾಣಾಳುಕೊಪ್ಪ, ಹಳೇ ಅಗ್ರಹಾರ, ಚಿಕ್ಕಮರಳ ವಾಡಿಗಳನ್ನೊಳಗೊಂಡಂತೆ ಈ ನಾಡು ಇದ್ದಿತೆನ್ನ ಬಹುದು.

**ಕಾಡನೂರು ೭೦**

ದೊಡ್ಡಬಳ್ಳಾಪುರ ತಾಲ್ಲೂಕಿನ ಕಾಡುನೂರಿನ ಸುತ್ತ ಮುತ್ತಲ ಸಾಂಪ್ರದಾಯಿಕವಾಗಿ ೭೦ ಗ್ರಾಮಗಳನ್ನೊಳಗೊಂಡ ಒಂದು ಪ್ರಾದೇಶಿಕ ವಿಭಾಗ ಮತ್ತು ಹೆಜ್ಜಾಜಿ-೧೨ ಇದರ ಒಂದು ಉಪ ವಿಭಾಗವೆಂಬ ಅಂಶ, ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಶಾಸನಗಳಿಂದ ತಿಳಿದು ಬರುತ್ತದೆ.[94]

---

93. ಅದೇ, ಕಾನಕಾನಹಳ್ಳಿ ೭
94. ಅದೇ, ೧೧, ಚಳ್ಳಕೆರೆ ೨೯ ಮತ್ತು ೩೦